# ಅರೆ ಭಾಷೆ ಗಾದೆಗ

ಸಂಗ್ರಹ :
ತೆಕ್ಕಡೆ ಬಿ ಕುಮಾರಸ್ವಾಮಿ

ವೇದ ಸುಳ್ಳಾದರೂ
ಗಾದೆ ಸುಳ್ಳಾಕಿಲೆ



ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ




ದಶವರ್ಷ ಸಂಭ್ರಮದ ಪುಸ್ತಕ ಮಾಲಿಕೆ 2021

# ಅರೆ ಭಾಷೆ ಗಾದೆಗ

## ವೇದ ಸುಳ್ಳಾದರೂ ಗಾದೆ ಸುಳ್ಳಾಕಿಲೆ

ಸಂಗ್ರಹ

**ತೆಕ್ಕಡೆ ಬಿ. ಕುಮಾರಸ್ವಾಮಿ**



**ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ**

ಮಡಿಕೇರಿ

Decennial Year Publication Series 2021

# ಅರೆಭಾಷೆ ಗಾದೆಗ
**Arebhashe Gadega**

Collected by
**Thekkade B. Kumaraswamy**
Mutharmudi Village, Murnad.
Mob : 9483234335

**ಸಲಹಾ ಸಮಿತಿ :**
ಶ್ರೀ ಲಕ್ಷ್ಮೀನಾರಾಯಣ ಕಜೆಗದ್ದೆ
ಶ್ರೀಮತಿ ಸ್ಮಿತಾ ಅಮೃತರಾಜ್
ಡಾ. ವಿಶ್ವನಾಥ ಬದಿಕಾನ
ಶ್ರೀಮತಿ ಬೈತಡ್ಕ ಜಾನಕಿ ಬೆಳ್ಯಪ್ಪ
ಶ್ರೀ ಭರತೇಶ ಅಲಸಂಡೆಮಜಲು

ಪ್ರಕಟಣೆ :
**ರಿಜಿಸ್ಟ್ರಾರ್**
**ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ**

ಪುಸ್ತಕ ದೊರೆಯುವ ಸ್ಥಳ :
**ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ**
ಕಾಫಿಕೃಪಾ ಬಿಲ್ಡಿಂಗ್, ರಾಜಾಸೀಟ್ ರಸ್ತೆ, ಮಡಿಕೇರಿ
ದೂ: 08272-223055, ಮೊ : 6362522677
arebaseacademy@gmail.com,
https://arebhasheacademy.karnataka.gov.in

ಪ್ರಕಟಣೆಯ ವರ್ಷ : 2022



ಪುಟಗಳು : 88
ಬೆಲೆ : ರೂ. 75
ಪ್ರತಿಗಳು : 300

ಆಕಾರ : ಡೆಮಿ 1/8
ಕಾಗದ : 80 ಜಿಎಸ್‌ಎಂ ಮ್ಯಾಪ್ಲಿತೋ

ಪುಟ ವಿನ್ಯಾಸ ಮತ್ತು ಮುದ್ರಣ :
**ಶ್ರೀ ಕೃಷ್ಣ ಕಂಪ್ಯೂಟರ್ಸ್ & ಪ್ರಿಂಟರ್ಸ್,**
ಪೂಜಾ ಆರ್ಕೆಡ್, ಜೂನಿಯರ್ ಕಾಲೇಜು ರಸ್ತೆ, ಮಡಿಕೇರಿ.
Ph. 08272-224919, 9448135592

# ಅಧ್ಯಕ್ಷರ ಮಾತ್

ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿಯ ಪುಸ್ತಕ ಪ್ರಕಟಣಾ ಯೋಜನೆಯಡಿಲಿ ತೆಕ್ಕಡೆ ಬಿ. ಕುಮಾರಸ್ವಾಮಿಯವರ 'ಅರೆಭಾಷೆ ಗಾದೆಗ' ಪ್ರಕಟ ಆಗ್‌ತ್ತಾ ಇರ್‍ದು ಕುಸಿನ ಸಂಗತಿ.

"ವೇದ ಸುಳ್ಳಾದರೂ ಗಾದೆ ಸುಳ್ಳಾಕಿಲೆ" ಹೇಳುವಂತದ್ದ್ ಜನಜನಿತ ಮಾತ್. ಭಾಷೆಗಳ ಜೀವ ಇರುದ್ದೇ ಈ ಗಾದೆ ಮಾತ್‌ಗಳ್‌ಲಿ. ಅರೆಭಾಷೆನ ಪೊರ್ಲು ಇರುದ್ದೇ ಈ ಗಾದೆಲಿ. ಗಾದೆಗಳ್‌ಲಿ ಜೀವನ ವಿಧಾನ ಉಟ್ಟು, ಬೊದ್ಕ್‌ನ ತಿರ್‌ಳ್ ಉಟ್ಟು. ದಿನ ನಿತ್ಯದ ಬೊದ್ಕುನ ಕ್ರಮಂದನೇ ಗಾದೆಗ ಹುಟ್ಟಿಕಂಡ್, ಅದ್ ಈಗ ದಿನ ನಿತ್ಯದ ಮಾತ್‌ಗಳ್‌ಲಿ ಬಳಕೆ ಆಗುವ ರೀತಿನೇ ವಿಶೇಷ. ಪಂಡ್‌ಲಿ ಪ್ರತೀ ಸಂದರ್ಭಕ್ಕೂ ಒಂದ್ ಗಾದೆ ಮಾತ್ ಒದ್‌ಗಿ ಬರ್‍ತಿತ್. ನಮಿಗೆ ಅದರ್‍ನ ಉಪಯೋಗಿಸಿಕೆ ಬಾರದಿದ್ದರೂ ಕೇಳಿ ಆದರೂ ಗೊತ್ತುಟ್ಟು. ಆದರೆ ನಮ್ಮ ಮಕ್ಕಳಿಗೆ ಆ ಭಾಗ್ಯನೂ ಇಲ್ಲೆ. ಇಂತಹ ಹೊತ್ತುಲಿ ತೆಕ್ಕಡೆ ಕುಮಾರ ಸ್ವಾಮಿಯವರ ಈ ಕೆಲ್ಸ್ ಮೆಚ್ಚುವಂತದ್ದ್. ಅರೆಭಾಷೆ ಸಂಸ್ಕೃತಿಲಿ ಗಾದೆಗ ಹಾಸ್‌ಹೊಕ್ಕಿಕಂಡುಟ್ಟು. ಒಳ್ಳೆದ್ದಕ್ಕೂ, ಕೆಟ್ಟದ್ದಕ್ಕೂ, ಹಬ್ಬಕ್ಕೆ, ಹರಿದಿನಕ್ಕೆ ಗಾದೆ ಇಲ್ಲದೆ ಇಲ್ಲೆ. ನಮ್ಮ ಈ ಪೊರ್ಲುನ ಬೊದ್‌ಕ್‌ನ ಸಾರನ ಗಾದೆಗಳ್‌ಲಿ ಹಿಡಿದಿಟ್ಟ ನಮ್ಮ ಪಂಡ್‌ನವರ ಕುಶಲತೆನ ಮೆಚ್ಚೋಕೆ. ಪ್ರತೀ ಗಾದೆಗೂ ಅರ್ಥವತ್ತಾದ ಅರ್ಥ ಉಟ್ಟು. ಪರಂಪರೆನ ನಮ್ಮ ಮಕ್ಕಳಿಗೂ ದಾಟಿಸೋಕುತಾದರೆ ಇಂತಹ ಪುಸ್ತಕಗಳ ಅಗತ್ಯ ನಮಗೆ ಉಟ್ಟು.

**– ಲಕ್ಷ್ಮೀ ನಾರಾಯಣ ಕಜೆಗದ್ದೆ**

ಅಧ್ಯಕ್ಷರು

ಕರ್ನಾಟಕ ಅರೆಭಾಷೆ ಮತ್ತು ಸಾಹಿತ್ಯ ಅಕಾಡೆಮಿ.

# ಪ್ರಸ್ತಾವನೆ

ಒಂದು ಗಾದೆ ಮಾತ್‌ಂದ ಒಬ್ಬ ವ್ಯಕ್ತಿನ ಕುಟುಂಬನ, ಒಂದು ಸಮುದಾಯನ, ಸಮಾಜನ ಪರಿವರ್ತನೆ ಮಾಡುವ, ಬದ್‌ಕ್‌ನ ಬದಲಾವಣೆ ಮಾಡುವ, ಮನಸ್ಸ್‌ನ ತಿದ್ದುವ, ಬುದ್ಧಿಮಾತ್ ಹೇಳುವ, ಬೆಂದ್ ನೊಂದ ಬದ್‌ಕಿಗೆ ಶಾಂತ್ವನ ಹೇಳುವ ಶಕ್ತಿ ಉಟ್ಟು. ಆದ ತಪ್ಪುನ ತಿದ್ದಿ ಮನವರಿಕೆ ಮಾಡಿಕೊಡುವ ಒಂದು ಯುಕ್ತಿ ಉಟ್ಟು. ಇದ್ ಒಂದು ಪೂರ್ಣ, ಒಂದು ಸಣ್ಣ ನುಡಿಗಟ್ಟ್. ಅನುಭವ ಮಂಟಪಂದ ರೂಢಿಗೆ ಬಂದ್ ತಲತಲಾಂತರಂದ ಜನಪದ ರೀತಿಲ್ಲಿ ಇರುವ ಒಂದು ಭಗವದ್ಗೀತೆ. ಅದರ್ದಂದನೇ "ವೇದ ಸುಳ್ಳಾದರೂ ಗಾದೆ ಸುಳ್ಳಾಕಿಲೆ" ಈ ಗಾದೆಗಳನ್ನ್ ಮತಷ್ಟ್ ಸಂಪತ್ತ್‌ಕರಿಸಿದೆ. ಹುಟ್ಟಂದ ಹಿಡ್ದ್ ಸಾಯುವವರೆಗೆ "ಹುಟ್ಟು ಗುಣ ಸುಟ್ಟರೂ ಹೋದುಲೆ" ಅಲ್ಲಿಯವರೆಗೂ ಪ್ರತಿ ಒಂದು ಕಾರ್ಯಕ್ರಮ ಜೀವನದ ಪರಿವರ್ತಕ ಆಗಿ, ಜನರ ಬಾಯಿಂದ ಬೋಧನೆ ರೂಪಲಿ ಹೊರಬಂದದೆ. ಸಾಂದರ್ಭಿಕ ಆಗಿ ಹಾಸ್ಯ, ಅಪಹಾಸ್ಯ, ಸುಖ–ದುಃಖ,ಕೋಪ–ತಾಪ. ಹೊಗಳಿಕೆ–ತೆಗಳಿಕೆ, ಅಟ್ಟಹಾಸ, ಅಸಹಾಯಕತೆ ಹಿಂಗೆ ಬೇರೆ ಬೇರೆ ಮನೋಧೋರಣೆಲಿ ಕಂಡ್ ಬಂದದೆ. ಆದರೆ ಅದರ ಭಾವಾರ್ಥ ಸಾರಾಂಶ ಅರ್ಥಪೂರ್ಣ.

ಗಾದೆ ಎಲ್ಲಾ ದೇಶ ಧರ್ಮ ಜಾತಿಲಿನೂ ಉಟ್ಟು. ಹಾಸಿಗೆಂದ ಏಳುವಲ್ಲಿಂದ, ಚಟ್ಟಲಿ ಮಲ್ಗಿ, ಬೆಂಕಿ ಕೊಡುವವರೆಗೂ,ಅಷ್ಟೇ ಏಕೆ ಮಣ್ಣ್‌ಲಿ ಮಣ್ಣಾಗಿ ಪಾಠ ಕಲ್ಸತಾ, ಬದ್‌ಕ್ ನೊಟ್ಟಿಗೆ ತಲತಲಾಂತರಂದ ಬಂದ ಅನುಭವದ ಪದ, ವಾಕ್ಯ ರೂಪಲಿ ಜನಪದ ಆಗಿ, ಹಂಗೇನೆ ಮುಂದೆ ಹೋಗುತ್ತಾ ಉಟ್ಟು. ಪುರಾಣ, ರಾಮಯಣ, ಮಹಾಭಾರತ, ವೇದಗಳ ಕಾಲಗಳ ನಿದರ್ಶನದ ಉದಾಹರಣೆಗಳ ಅಂಶ ಗಾದೆ ಮಾತ್‌ಲಿ ಕಾಣಕ್. ಮನ್ಸನ ಮನ ಪರಿವರ್ತನೆ ಮಾಡುವ ದೈವ ವಾಣಿ. ಈ ಗಾದೆ ಮಾತ್. "ಆಡ್ ಮುಟ್ಟದ ಸೊಪ್ಪಿಲ್ಲೆ" ತೇಳುವ ಹಂಗೆ ಗಾದೆ ಮಾತ್ ಜನಸಾಮಾನ್ಯರ ಒಂದು ಕೋಶ, ಸಂವಿಧಾನ ರಾಜದ ಆಡಳಿತ ಸೂತ್ರದ ನಿಬಂಧನೆ, ಗಾದೆ ಬದ್‌ಕ್‌ನ ಸಂವಿಧಾನದ ರೂಪರೇಷೆ. ಗಾದೆ ಜೀವನ ದರ್ಶನದ ಕೈ ಕನ್ನಡಿ, ವಿವೇಚನೆ, ವಿಧಾನ, ನಿಷೇದ, ಜೀವನ ಸೌಂದರ್ಯ, ಪ್ರಜ್ಞೆ, ವ್ಯವಹಾರ, ನೀತಿ, ಅಸಹಾಯಕತೆ, ಅಭಿರುಚಿ, ಪ್ರಭಾವ, ಪರಿವರ್ತನೆ, ನಿಯಮ, ಕಾಲಮಹತ್ವ, ಸಾರ್ಥಕತೆ, ಅವಲಂಬನೆ ಚಾರಿತ್ರೆತೆ,

ಇದೆಲ್ಲದರ ಸ್ವಂತ ಅನುಭವ ಹೊರಬಂದದೆ. ಜನರ ಬದ್‍ಕ್‍ನ ನಿರ್ದೇಶಕ, ನಿಯಂತ್ರಕ ಅಪರಾಧತನಕ್ಕೆ ಶಿಕ್ಷೆ ವಿಧಿಸಿದೆ, ಅಸಹಾಯಕತೆಗೆ ಧೈರ್ಯ ತುಂಬಿದೆ. ತಪ್ಪು ದಾರಿಲಿ ಹೋಗುವವಂಗೆ ದಾರಿ ತೋರ್ಸಿದೆ, ಕಷ್ಟಕ್ಕೆ ಸಿಕ್ಕಿ ಹಾಕಿ ಕಂಡವಂಗೆ ಸಮಾಧಾನ ಮಾಡ್ದೆ. ಮನ್ಸ್‌ನ ಒಳಗಿರುವ ಸಂಕಟನ ದೂರ ಮಾಡ್ದೆ. ಗಾದೆ ಕೈ ಹಿಡಿಯುವ ಗುರು ಆಗಿ, ಮುಂದೆ ನಡ್ಸುವ ಅಪ್ಪ ಆಗಿ, ವಾತ್ಸಲ್ಯ ತೋರ್ಸುವ ಅವ್ವ ಆಗಿ, ಕಾಪಾಡುವ ಭಗವಂತ ಆಗಿ ಒಟ್ಟಿಗೆ ಇದ್ದದೆ. ಸರಳ ರೂಪ, ಸುಲಭ, ಮನ್ಸಲಿ ಉಳ್ದದೆ. ದೇವುರ ಮಾತ್ ರೂಪಲಿ, ಪೂರ್ವಜರಂದ ಕೃಷಿ ರೂಪಲಿ, ಪಿತ್ರಾರ್ಜಿತ ಆಸ್ತಿ ರೂಪಲಿ ಇರುವ ಈ ಗಾದೆನ ಮುಂದಿನ ಪೀಳಿಗೇಗೆ, ಅಳ್ದ್ ಹೋಗದಂಗೆ ಉಳ್ಸಿಕಂಡ್ ಹೋದು ಪ್ರತಿಯೊಬ್ಬನ ಬಹಳ ದೊಡ್ಡ ಜವಾಬ್ದಾರಿ ಆಗಿ ಉಟ್ಟು.

ಸಣ್ಣ ಸಾರಾಂಶದ ಜನಪ್ರೀಯತೆ ಇರುವ ಇದರ್‍ನ ಹೇಳಿರೆ ಯಾರೊಬ್ಬನೂ ಸನ ಬೇಸರ ಮಾಡಿಕಿಲ್ಲೆ. ಕೆಲವು ಪದಗ ಮಾರ್ಮಿಕ ಆಗಿ ಇದ್ದರೂ ಸನ ಅದರ ಭಾವಾರ್ಥ ಮಹತ್ವ ಪೂರ್ಣ. ಬರವಣಿಗೆಲಿ ಅದ್ ಬೇಡದ ಪದತ ಅನ್ಸುದುಲೆ. ಅರೆಭಾಷೆ ಪದಗ ಬಾಳಷ್ಟ ತತ್ಸಮ ತದ್ಭವ ರೂಪಲಿ ಉಟ್ಟು. "ಮುಂಡೆ" ತ ಹೇಳ್ಕನ ಅದ್ ಮನಸ್ಸ್‌ಗೆ ತಾಟುವ ರೀತಿ, ವಿಧವೆ ತೇಳ್ಕನ ಇರ್ದುಲೆ", ತಾಳ ಹಾಕಿಕೆ ಹೋಗಿ ತರ್‍ಡ್ ಸಿಕ್ಕಿಸಿ ಕಂಡತ್, ಮಾಡಿಕಾಗದ ಕೆಲ್ಸ ಅವಂದ ಆಗಿ ಹೋಗಿ ಅಪಾಯಲಿ ಸಿಕ್ಕಿ ಹಾಕಿಕಂಡದೆತ. ಆದರೆ, ಅದಿಕೆ ಸಂಬಂಧಿಸಿದ ಹಂಗೆ "ಈ ಎರಡೂ ಗಾದೆನ ಒಳಾರ್ಥ ಒಂದೇ ರೀತಿ ಕಂಡದೆ. ಅದರೆ ಕೆಲವೊಂದು ಸಲ ಸಾಂದರ್ಭಿಕ ಆಗಿ ಅರ್ಥೈಸಿದೆ. ನಾವು "ಕಂಡದರ್‍ನ ಕಂಡಂಗೆ ಹೆಳ್ದರೆ ಕೆಂಡಂದಂತ ಕೋಪ" ಎದ್ದ್ ಬಂದ್ ಎದೆ ಮೇಲೆ ಓದ್ದಂಗೆ "ಅಂದರೆ ಸೀದ ಮಾತ್‍ಂದ ಒಬ್ಬ ಸಿಟ್ಟಾದೆ. ಆದರೆ ಗಾದೆ ಮಾತ್‍ಂದ ಯಾರೂ ಸಿಟ್ಟಾದುಲೆ ಈ ಗುಣಧರ್ಮ ಗಾದೆಲಿ ಉಟ್ಟು.

"ಕಂಡವರ ಕಾಲಿಗೆ ಬಿದ್ದರೂ ಗಂಡನ ಮನೆಗೆ ಹೋದು ತಪ್ಪುದುಲೆ" ಹೆಣ್ಣ್ ಮಗಳ್ ಸಂಪ್ರದಾಯ. ವಿಳ್ಯ ಶಾಸ್ತ್ರಂದ ಹಿಡ್‍ದ್ದ್ ನಾಗೋಳಿ ಶಾಸ್ತ್ರದವರೆಗೆ ಗೂಡೆ ಅಪ್ಪ, ಅವ್ವ, ಸೋದರಮಾವ ಹಿಂಗೆ ಹಿರಿಯವರೆಲ್ಲರ ಕಾಲಿಗೆ ಬಿದ್ದದೆ. ವೈಜ್ಞಾನಿಕ ಆಗಿ ಪಾದ ಮುಟ್ಟಿ ನಮಸ್ಕಾರ ಮಾಡ್ದು ಒಂದು ಒಳ್ಳೆ ವ್ಯಾಯಾಮ.

ಕಾಲ್ ಹಿಡಿಯಕನ "ಧೀರ್ಘ ಸುಮಂಗಲೀ ಭವ" ದೇವುರು ಒಳ್ಳೆದ್ ಮಾಡಲಿ" ಚೆನ್ನಾಗಿ ಬಾಳ್" ಹಿಂಗೆಲ್ಲಾ ಆಶೀರ್ವಾದ ಮಾಡುವೆ. ಹಿರಿಯವನೊಬ್ಬನ ಕಾಲ್ ಹಿಡಿಯಕನ ಅಂವ ಹಿಂಗೆ ಹೇಳ್ದೆ, ಯಾಕವ್ವ ನನ್ನ ಕಾಲ್ ಹಿಡ್ದಿಯಾ? ನೀನ್ ಯಾರ ಕಾಲ್‌ಗೆ ಬಿದ್ದರೂ ಗಂಡನ ಮನೆಗೆ ಹೋದು ತಪ್ಪಿಕಿಲೆತ. ಕಾಲ್ ಹಿಡಿಯದೊಂದ ಸಂಪ್ರದಾಯ ಕೂಡ ಹೌದು. ಗೂಡೆನ ಮದುವೆ ಮಾಡಿ ಕೊಟ್ಟ ಮೇಲೆ "ಕೊಟ್ಟ ಹೆಣ್ಣ್ ಕುಲಂದ ಹೊರಗೆ" ಮದುವೆ ಆಗಿ ಹೋದ ಮೇಲೆ "ಗಂಜಿ ಕುಡ್ದರೂ ಗಂಡನ ಮನೆನೆ ಸುಖದ ಬಿಡಾರ. ಹಿಂಗೆ ಮತ್ತೆ ಹತ್ತಾರ ಗಾದೆಗ ಹೆಣ್ಣ್ ಮಗಳ ಸುತ್ತ ಮುತ್ತ ಇದ್ದರೂ ಇದ್ ಇನ್ನಿತರ ಸಂದರ್ಭಲಿ ಜನ ಸಾಮಾನ್ಯರಿಗೆ ಅನ್ವಯಿಸಿದೆ.

ಬಡವುಕೆ ಹೆಚ್ಚ್ ಮಕ್ಕ ಹುಟ್ಟಿರೆ "ಹುಟ್ಟಿಸಿದ ದೇವುರು ಹುಲ್ಲು ಮೇಯಿಸಿಕಿಲೆತ" ಅಂವ ಅವಂಗೆ ಸಮಾಧಾನ ಹೇಳಿಕಂಡದೆ ಮುಂದೆ ಆದೆ ಮಕ್ಕಳ್‌ಂದ ತೊಂದರೆ ಆದರೆ "ತೆಂಗ್‌ನ ಮರ  ನೆಟ್ಟಿದ್ದರೆ ಎಳೆನೀರ್ ಸಿಕ್ಕ್‌ತ್ತಿತ್. ಪ್ರಾಯಕ್ಕೆ ಬಂದ ಮಕ್ಕಳ್‌ಂದ ಕಣ್ಣೀರ್ ಸಿಕ್ಕಿ ಹೋತ್" ತನ್ನ ಅಸಹಾಯಕತೆನ ಹೇಳಿಕಂಡದೆ, ಅತ್ತೆನು ಸೊಸೆನು ಜಗಳ ಆಡಿ ಕಂಡರೆ "ಯಾವ ಕಾಲ್ ಮುರ್ದರೂ ಸೊಂಟಕ್ಕೆ ಬೇನೆ" ಡೋಲಾಯಮನ ಪರಿಸ್ಥಿತಿ. ಖಾಯಿಲೆ ಬಾಕಾಕನ "ಖಾಯಿಲೆ  ಮನ್ಸಂಗೆ ಬಾರದೆ ಕಲ್ಲ್ ಮರಕ್ಕೆ ಬಂದದ್ಯಾ"? ತ ಹೇಳಿಕಂಡವೆ. ವಯಸ್ಸಾದ ಮೇಲೆ "ಊರು ಹೋಗುತೇಳ್ದೆ ಕಾಡ್ ಬಾ ತೇಳ್ದೆ" ತನ್ನ ಕೊನೆ ಕಾಲದ ಪ್ರಯಣದತ್ತ ಯೋಚಿಸಿದೆ. ಹಿಂಗೆ ಒಂದು ಜನಾಂಗದ ನರ ನಾಡಿ ಒಟ್ಟಿಗೆ ರಕ್ತಗತ ಆಗಿ ಹಂಚಿ ಬಂದೆ. ಇದಿಕ್ಕೆಲ್ಲ ಕಾರಣ ಸಂಬಂಧದವರ ಸಂಪರ್ಕ, ಒಡನಾಡಿಗಳ ಬಾಂಧವ್ಯ. ಪ್ರತಿಯೊಬ್ಬನೂ ಸನ ಈ ಗಾದೆ ಮಾತ್‌ನ ಉಳ್ಸಿಕಂಡ್ ಹೋಗಲಿ. ನಾನ್ ಸಂಗ್ರಹಿಸಿದ ಗಾದೆ ಜೊತೆಗೆ ಇನ್ನಷ್ಟು ಗಾದೆ ಮಾತ್‌ಗ ಬುಟ್ಟ್ ಹೋಗಿರ್ದು, ಅದರ್‌ನ ಸನ ಇದರೊಟ್ಟಿಗೆ ಸೇರ್ಸಿಕಂಡ್ ಒಂದ್ ಗಾದೆ ಹೇಳದ್‌ಂಗೆ  ಗಾದೆ ಒಂದಾಂಗಿ ಉಳಿಯದೆ ನೀಲಿ ಆಕಾಶಲಿ ನಕ್ಷತ್ರ ಮಿನುಗುವ ಹಂಗೆ ಮಿನುಗುತ್ತಾ ಇರ್ಲಿತ ನಾನ್ ಬಯ್ಸಿನೆ.

**– ತೆಕ್ಕಡೆ ಬಿ ಕುಮಾರಸ್ವಾಮಿ**

ಮುತ್ತಾರ್ಮುಡಿ

# ಗೌಡ ಚರಿತೆ

ಗೌಡ ಜನಾಂಗದ ಮೂಲವನ್ನು ಹುಡುಕುತ್ತಾ ಸಾಗಿದರೆ ಅದು ನಮ್ಮನ್ನು ಪುರಾಣ ಇತಿಹಾಸದ ರಾಮಾಯಣ, ಮಹಾಭಾರತದ ಕಾವ್ಯದವರೆಗೆ ಕೊಂಡೊಯ್ದು ಪ್ರಾಚೀನ ಕಾಲದ ಹರಪ್ಪ ಮೊಹೆಂಜೊದಾರೊ ಸಿಂಧೂ ನಾಗರೀಕತೆಯ ಕಾಲದಿಂದ ವೇದಗಳ ಕಾಲ ಋಗ್ವೇದದವರೆಗೂ ಬೆಳಕನ್ನೂ ಚೆಲ್ಲುತ್ತದೆ. ಹಿಂದೆ "ಗೌಡ" ದೇಶವೊಂದಿತ್ತು ಅದಕ್ಕೊಬ್ಬ ಗೌಡ ದೊರೆಯಿದ್ದ.

"ಗೌಡ" ಶಬ್ದವು ಅತೀ ಪ್ರಾಚೀನವಾದದ್ದು ಹಿಂದೆ ಗೌಡದೇಶ ಒಂದು ಇತ್ತು ಎಂಬುದು ತಿಳಿದು ಬರುತ್ತದೆ. ಪೂರ್ವದಲ್ಲಿ ಆಂದ್ರ, ತಮಿಳುನಾಡು, ಕರ್ನಾಟಕ, ಮಹಾರಾಷ್ಟ್ರ, ಗುಜರಾತ್‌ಗಳು ಪಂಚಗೌಡ ದೇಶವೆಂದು ಕರೆಯಲ್ಪಟ್ಟಿತ್ತು ಎಂಬ ದಾಖಲೆ ಇದೆ. ಗೌಡ ದ್ರಾವೀಡ ಮೂಲ. ಇಲ್ಲಿ ಗೌಡವೆಂಬುದು ಆ ಕಾಲದ ಪ್ರಚಲಿತ ಸಂಸ್ಕೃತಿ. ಆರ್ಯಾವೃತ್ತದಿಂದ ದಕ್ಷಿಣಕ್ಕೆ ವಲಸೆ ಬಂದು ಬೇರೂರಿ ತಮ್ಮ ಸಂಸ್ಕೃತಿಯ ಪ್ರತೀಕವಾಗಿ "ಗೌಡ" ಎಂಬ ಹೆಸರಿನಿಂದಲೇ ಇಂದಿಗೂ ಉಳಿದುಕೊಂಡು ಬಂದಿದೆ. 2ನೇ ಚಾಲುಕ್ಯರ ವಿಕ್ರಮಾದಿತ್ಯ ಬಂಗಾಳದ ಗೌಡ ರಾಜ್ಯವನ್ನು ಗೆದ್ದನೆಂದು, ರಾಷ್ಟ್ರಕೂಟರ ಅರಸ ಅಮೋಘವರ್ಷನ ಮಗ ಕೃಷ್ಣ 2ನೇ ಗೌಡರನ್ನ ಸದೆ ಬಡಿದಿರುವ ಮಾಹಿತಿ ಇತಿಹಾಸದಲ್ಲಿದೆ. ಗೌಡಬಂಗಾಳ ಜನಾಂಗವು ಹಿಂದೆ ಬಂಗಾಳದಲ್ಲಿ ಇತ್ತೆಂದು ಗೌಡ ಸಾರಸತ್ವರು" ಎಂಬುದಾಗಿ ಕೊಂಕಣಿ ಜನಾಂಗದವರು ಹೇಳಿಕೊಂಡ ಉಲ್ಲೇಖವಿದೆ.

"ಗೌಡ" ಎಂದರೆ ಯಜಮಾನನೆಂದು ಅರ್ಥವಿದ್ದು, ಪ್ರಾಚೀನ ಗ್ರಂಥದಲ್ಲಿಯೂ, ಗಾವುಂಡ, ಗೌಡಿ, ಗವೂಂಡಿ, ಗಂವೂಂಡರ್ ಎಂಬ ಪದಗಳು ಸಿಗುತ್ತವೆ. ಗೌಡಾಳ್ವಿಕೆಯು ಚೇರಳ ಕಾಲದಲ್ಲಿ ಪ್ರಾರಂಭವಾಗಿ ಗಂಗರಸರ ಕಾಲಕ್ಕೆ ದಕ್ಷಣಿ ಮೈಸೂರು ಪ್ರಾಂತ್ಯಕ್ಕೆ ವಿಸ್ತಿರಿಸಿದಂತೆ ಕಾಣುತ್ತದೆ. ಕೇರಳ, ತಮಿಳುನಾಡು ರಾಜ್ಯ ವಿಸ್ತರಣೆಯಾದಂತೆ ಅಲ್ಲಿ ಬೇರೂರಿದ ಗೌಡಾಳ್ವಿಕೆಯು ವೆಳ್ಳಾಲ ಗೌಂಡರ್, ಬೆಳ್ಳಿಯ ಗೌಂಡರ್ಗಳೆಂದಿದ್ದಾರೆ. ಮನೆ ಮಾತು ಮಳೆಯಾಳ ತಮಿಳು, ಕೊಯಮತ್ತೂರು, ಸತ್ಯಮಂಗಲ, ಪಾಲಘೌಟ್ ಕಡೆ ಗೌಡರ್,ಗೌಂಡರ್ ಇದ್ದು ಇವರ ಮನೆ ಮಾತು ಕನ್ನಡ, ಮನೆಯಿಂದ ಹೊರಬಂದಾಗ ತಮಿಳು.ದೇವರು ಕಾಲಭೈರವ ಇದು ಮಾಕೋನಹಳ್ಳಿ ದೊಡ್ಡಮನೆ ದೊಡ್ಡಪ್ಪ ಗೌಡರ ಲೇಖನದ ಸಾರಾಂಶ.

ಗೌಡ ಜನಾಂಗ ಕೊಡಗು, ಮೈಸೂರು, ಮಂಡ್ಯ, ಹಾಸನ, ಚಿಕ್ಕಮಗಳೂರು,

ದಕ್ಷಿಣ ಕನ್ನಡ, ಉತ್ತರ ಕನ್ನಡ, ವೆಗೈರೆ ಕಡೆಗಳಲ್ಲಿ ಗೌಡ ಒಕ್ಕಲಿಂಗರೆಂದೂ, ತಮಿಳುನಾಡಿನ ಕೊಯಮತ್ತೂರು, ದೇವಗಿರಿಯಕಡೆ ಗೌಡರೆಂದೂ, ಆಂದ್ರ, ಮಧ್ಯಪ್ರದೇಶದ ಕೆಲವು ಜಿಲ್ಲೆಗಳಲ್ಲಿ ರೆಡ್ಡಿ ಜನಾಂಗವೆಂದು ಇದೆ. 1966 ರ ಜನಗಣತಿಯಂತೆ ಕೊಡಗಿನಲ್ಲಿ 30,000 ಕ್ಕಿಂತಲೂ ಹೆಚ್ಚು ಜನಸಂಖ್ಯೆ, ದಕ್ಷಿಣ ಕನ್ನಡ ಜಿಲ್ಲೆಯಲ್ಲಿ 3 ಲಕ್ಷಕಿಂತಲೂ ಹೆಚ್ಚು. ಮೈಸೂರು ವಿಭಾಗದಲ್ಲಿ 15 ರಿಂದ 20 ಲಕ್ಷಕಿಂತಲೂ ಹೆಚ್ಚಿರುವಂತೆ ಕಂಡುಬರುವುತ್ತದೆ. (–)1700–1800 ರ ಇಸವಿಯೊಳಗೆ ಕೊಡಗಿನ ಲಿಂಗರಾಜ ಮಲೆನಾಡಿನ ಪಾಳು ಭೂಮಿಯನ್ನು ರೂಪಿಸಲು ಸುಳ್ಯ ಪುತ್ತೂರು ಇಕ್ಕೇರಿ ಸಂಸ್ಥಾನಗಳಿಂದ ಬರಮಾಡಿಕೊಂಡು ಜಮ್ಮ ಜಹಗೀರು, ಉಂಬಳಿ ನೀಡಿರ ಬಹುದೆಂಬ ನಂಬಿಕೆ. ಸ್ವಾಲಂಭಿಗಳಾದ ಇವರು ಸ್ವತಂತ್ರ ರಾಜ್ಯಾಡಳಿತ ನಡೆಸಿರಬಹುದೆಂಬುದಕ್ಕೆ ಜನರ ಲಗ್ನ ಕಾರ್ಯಗಳು ಇತರ ಹಿಂದುಗಳಂತೆ ಕಂಕಣ, ಪಟ್ಟ, ಬಾಸಿಂಗ, ದಾರೆ, ಹಸೆಮಣೆ, ರಾಮ ಕೃಷ್ಣರ ಮೇಲಿನ ಶೋಭಾನೆ ಹಾಡುಗಳು,ಉಚ್ಚ ಪದ್ಧತಿಗಳನ್ನು ನೋಡಿದಾಗ ವೈಭವದಿಂದ ಬಾಳಿ ಬದುಕುತ್ತಾ ಬಂದಿರುವವರಾಗಿರುತ್ತಾರೆ. ದಕ್ಷಿಣದ ಕಡೆಗೆ ಬರುವ ಮೊದಲೂ 1300 ರಿಂದ 1600ರ ವರೆಗೆ ವಿಜಯನಗರದ ಸಾಮ್ರಾಜ್ಯದಲ್ಲಿ ನೆಲೆಸಿದ್ದರೆಂದು,ತಾಳಿಕೋಟೆಯ ಯದ್ಧದ ನಂತರ ಮುಸಲ್ಮಾನರ ಭಯದಿಂದ ಚದುರಿ ಪಾಳಯಗಾರರಾಗಿ ರಾಜ್ಯವಾಳಿರಬಹುದೆಂದು ಪ್ರತೀತಿ ಇದೆ.

ವಿಜಯನಗರ ಪರಂಪರೆಯಲ್ಲಿ "ತಾಳುವ" ಅಥವಾ "ತುಳು" ವಂಶದವರು ಸ್ವಲ್ಪ ಕಾಲ ರಾಜ್ಯವಾಳಿದವರೆಂದೂ,ಅವರು ಗೌಡ ಜನರೆಂಬ ಭಾವನೆಯಿದೆ. ಕ್ರಿ.ಶ.1207 ರಲ್ಲಿ ಗೌಡ ಜನರು ಗೌಡ ದೇಶದವರಾಗಿದ್ದರು.ಆಗ ಭಾರತದ ಪ್ರಾಂತ್ಯಗಳನ್ನು ಅಂಗ, ವಂಗ, ಕಳಿಂಗ, ಕಾಂಭೋಜ, ಗೌಡ, ಗೂರ್ಜರ ಚಪ್ಪನ್ನೈತ್ತಾರು (50) ದೇಶಗಳೆಂದು ಕರೆಯುತ್ತಿರುವುದು ಪುರಾಣ. ಗೌಡ ದೇಶವೆಂಬುದು "ಅಲ್ಲ–ಹೋ–ಅಕ್ಬರ್" ಎಂಬ ಪುಸ್ತಕದಿಂದ ತಿಳಿದು ಬರುತ್ತದೆ. ಕ್ರಿ.ಶ 1207 ರಲ್ಲಿ ರಾಜ "ನಾರಾಯಣಗೌಡ" ನೆಂಬವನು ರಾಜ್ಯಭಾರ ಮಾಡುತ್ತಿದ್ದನೆಂದೂ, ದೆಹಲಿಯ ಮುಸಲ್ಮಾನ ರಾಜನಿಂದ ಈತನು ಕೊಲ್ಲಲ್ಪಟ್ಟನೆಂದೂ, ನಂತರ ಅವರ ಭಯದಿಂದ ದಕ್ಷಿಣದ ಕಡೆಗೆ ಬಂದನೆಂದು ನಂಬಬಹುದು. "ಗೌಡ ದೇಶ" ಯಾವುದೆಂದರೆ ಈಗಿನ ಬಿಹಾರ ಹಾಗೂ ಉತ್ತರ ಪ್ರದೇಶದ ಭಾಗಗಳೆಂದು ಹೇಳುತ್ತಾರೆ. ಬಂಗಾಳ ದೇಶದಲ್ಲಿರುವ ಜನರೂ ಈಗಲೂ ಆಚಾರ, ವಿಚಾರ, ಲಘ್ನ ವಗೈರೆಗಳು ಬಹುಮಟ್ಟಿಗೆ ಈ ಕಡೆಯು ಗೌಡ ಜನರ ಕ್ರಮಕ್ಕೆ ಹೋಲುತ್ತದೆ ಎಂಬುದು ಪ್ರತ್ಯಕ್ಷವಾಗಿ ಕಂಡ ಜನಾಭಿಪ್ರಾಯ.

"ಗೌಡ ದೇಶ" ಎಂಬ ಹೆಸರು ಹುಟ್ಟುವ ಮೊದಲು ಆ ದೇಶಕ್ಕೆ "ಗೂಡ್ ದೇಶ" ಅಂದರೆ "ಬೆಲ್ಲ ಮಾಡುವ" ದೇಶವೆಂದು ಹೆಸರು ಇದ್ದಂತೆಯೂ ಅದಕ್ಕೆ ಆ ಪ್ರದೇಶದಲ್ಲಿ ಕಬ್ಬಿನ ವ್ಯವಸ್ಯಾಯ ಹೆಚ್ಚಾಗಿದೆ ಎಂದು ಕಾಲ ಕ್ರಮೇಣ "ಗೋಡ್" ಎಂಬುದರ ಬದಲಾಗಿ "ಗೌಡ" ಎಂದು ಬದಲಾಗಿರಬಹುದು.ದಕ್ಷಿಣ ಕನ್ನಡದಲ್ಲಿ ದೈವದ ಕೋಲ ಕಟ್ಟುವಾಗ ದೈವ ಬಂದ ಮೊದಲು ಹೇಳುವುದುಂಟು. ಈ ಸಾರಾಂಸ ಶ್ರೀ ಪೇರಿಯನ ಪೂವಯ್ಯವರು ಸಂಪಿಗೆಕಾಡು ಎಸ್ಟೇಟ್ ಚೆಟ್ಟಳ್ಳಿ ಇವರ 1970 ರ ಗೌಡ ಸಂಸ್ಕೃತಿಯ ಅವಲೋಕನ ಎಂಬ ಲೇಖನದ್ದಾಗಿದೆ.

ದ್ರಾವಿಡರ ಆಗಮನ ಹಿಂದೂ ದೇಶಕ್ಕಾದರೂ ಎಲ್ಲಿಂದ ಬಂದರೆಂಬ ಐಕ್ಯಮತವಿಲ್ಲ.ಆದರೆ ದ್ರಾವೀಡ ಜನಾಂಗಕ್ಕೂ ಭೂಮಧ್ಯ ರೇಖೆಯ ಸಮುದ್ರ ನೆರೆಯ ಜನಾಂಗಕ್ಕೂ ಸಾಮ್ಯತೆ ಇದೆಯೆಂದು ಅತ್ತ ಕಡೆಯಿಂದ ಬಂದ ಜನಾಂಗದವರಲ್ಲಿ ಹಣ್ಣಿ ವಂಶವೂ ಎಂದು ಯೂರೂಪಿಯನ್ ವಿದ್ವಾಂಶರ ಅಭಿಪ್ರಾಯ. ಹಟ್ಟಿಕಾರ ಪಂಗಡಕ್ಕೆ ವೆಳ್ಳರು, ನಂದಿಧ್ವಜರು ಮೂಲಮತಸ್ಥರು ವೆಳ್ಳರಿಂದ ತಮಿಳು, ವೆಳ್ಳರಲ್ಲಿ ಕೆಲವರು ತೆಲಗರಲ್ಲಿ ಸೇರಿ ವೆಳಂರಾದರು. ನಂದಿಧ್ವಜದಲ್ಲಿ ಕುರು(ಂ)ವರು ಮತ್ತು ತುರುವರು, ಕುಡುವರು ತುರುವರು ಈ ವೃಕ್ಷಕ್ಕೆ ಸೇರಿದವರಲ್ಲಿ ಗೌಳ (ಗೌಡರು) ಎಂಬುದಾಗಿ ವಿಂಗಡಣೆ ಕಾಣಬಹುದು. ತುರುವರಿಗೆ (ತುರ್ವ) ಅತೀ ಪ್ರಾಚೀನ ವೇದವಾದ ಋಗ್ವೇದದಲ್ಲಿ "ತುರ್ವ" ರೆಂದು ಈ ತುರ್ವರು ಅಥವಾ ತುರ್ವಕರು ಪುರಾಣದಲ್ಲಿ ತುರ್ವರುಗಳೆಂದು ವರ್ಣಿಸಿದ್ದಾರೆ. ವಸು ಎಂದರೆ ಧನ ಎಂದೂ ಇನ್ನೊಂದು ಅರ್ಥದಲ್ಲಿ ದೇವತೆಗಳ ಒಂದು ವರ್ಗವೆಂದೂ ಇದೆ. ಇಲ್ಲಿ "ತ್ವರಿನ" ವಸು ಎಂದರೆ ಧನವುಳ್ಳ ಜನಾಂಗದವರೆಂದು ಅರ್ಥ. ಯದು-ತರ್ವರು ಬಹಳ ವರ್ಷಗಳಿಂದ ಹಿಂದೆ ಸಮುದ್ರವನ್ನು ದಾಟಿ ಬಂದರೆಂದು ಹಾಗೆ ಸಿಂಧೂ ತೀರವನ್ನು ನೆಲೆವೀಡಾಗಿ ಮಾಡಿ ವೇದಗಳ ಕಾಲಕ್ಕಿಂತ ಮೊದಲೇ ಸರಿದು ಮಹಾಭಾರತದ ಕಾಲಕ್ಕೆ ಗಂಗಾ ಯಮುನ ನಾಡಿಗೆ ಬಂದರೆಂದು ಹೇಳುತ್ತಾರೆ.

ಇದರಲ್ಲಿ ಇನ್ನೊಂದು ಶಾಖೆಯು ಸೌರಾಷ್ಟ್ರಕ್ಕೂ ಹೋಗಿರಬೇಕು,ಅಲ್ಲಿಂದ ಪಶ್ಚಿಮ ಕರಾವಳಿಯ ಕಡೆಗೆ ಬಂದು ಅಲ್ಲಿಂದ ಈಗಿನ ಮಹಾರಾಷ್ಟ್ರ ಬೆಳಗಾಂ, ಉತ್ತರ ಕನ್ನಡ, ದಾರಾವಾಡ, ಬಳ್ಳಾರಿ, ಜಿಲ್ಲೆಗಳಲ್ಲಿ ನೆಲೆಸಿರಬೇಕೆಂಬ ಊಹೆಯಿದೆ. ತುರ್ವರು ದಕ್ಷಿಣಕ್ಕೆ ಸೇರಿದವರೆಂದು ಪುರಾಣಗಳು ಹೇಳುತ್ತವೆ. ಗಂಗಾ ತೀರದಿಂದ ಬಂದ ಹಟ್ಟಿಕಾರರೇ ಗಂಗಾರಾಗಿರಬೇಕು. ಇವರೆ ಗಂಗಡಿಕಾರರ

ಮೂಲಪುರುಷರು, ಗಂಗರಂತೆ ಕಾಪುರೆಡ್ಡಿಗಳು ಚಾಲುಕ್ಯರ ಮೂಲ ಪುರುಷರು, ಅಗಸ್ತ್ಯ ಋಷಿಯ ಮದುವೆಯಾದ ಲೋಪಮುದ್ರೆಯು ವಿದರ್ಭ(ಹಟ್ಟಿಕಾರ) ನಾಡಿನವಳಂತೆ.

ಈ ಹಟ್ಟಿಕಾರರಲ್ಲಿ ಒಂದು ಶಾಖೆಯವರು ಗೋವಳರಾಗಿ "ಗೋ" (ಪೃಥ್ವಿ) ಪಾಲಕರೆಂದು ಹೇಳುತ್ತಾರೆ. ದನಗಾರಿಕೆ ಯುಗದಲ್ಲಿ "ಗೋ" ಪಸು ಭೂಪನಾದನು. ಅಲ್ಲಿಂದ ವಸ್ತ್ರಯುಗ ಪ್ರಾರಂಭವಾಗಿ ಜಾಡ,ಚೇರ,ಚೋಳ, ಚಾಲುಕ್ಯರಾದರೆಂದು ಹೇಳುತ್ತಾರೆ. ಕಾಲಕ್ರಮೇಣದಲ್ಲಿ ಒಕ್ಕಲುತನದ ವ್ಯಾಪಾರೋದ್ಯಮದಲ್ಲಿ ತೊಡಗಿದರು. ಮುಂದೆ ದನದ ಅಭಿವೃದ್ಧಿಯನ್ನು ಮೂಲಕಸುಬಿನಿಂದ ಬಿಟ್ಟು ರಾಜ್ಯದಲ್ಲಿ ಬಾಹುಬಲದಿಂದ ಧನಸಂಪಾದನೆ ಮಾಡುವ ರೂಢಿಯು ತಲೆದೂರಿದಾಗ ಗೋಪರು (ಗೌಡರೂ, ಪಟ್ಟಿಕಾರರೂ) ಭುಜಬಲಶಾಲಿಗಳಾದ ಕ್ಷತ್ರಿಯರಾದರು. ರಾಷ್ಟ್ರಕೂಟರ ಚಿಹ್ನೆ ನೇಗಿಲೆಂದು ಅವರು ಗೌಡ ಗೌಡರೆಂದೂ, ಪಾಟೀಲರೆಂದೂ, ಪಟ್ಟಿಲ ಎಂದರೆ ಹಟ್ಟಿಕಾರರು ಗೋವಳರು ಆದುದರಿಂದ ಪಾಟೀಲರೆಂದರೆ ಗೌಳ ಗೌಡರೇ ಎಂದು ಇತಿಹಾಸಕಾರರು ಹೇಳುತ್ತಾರೆ. ದಕ್ಷಿಣ ಕನ್ನಡ ಜಿಲ್ಲೆಯ ತುಳುನಾಡು ಎಂಬುದಕ್ಕೆ ತುರುಕಾರರ ನಾಡು, ತುರುಗಳನ್ನು (ದನಕರುಗಳನ್ನು) ಹೆಚ್ಚಾಗಿ ಸಾಕುತ್ತಿದ್ದುದರಿಂದ ಕ್ರಮೇಣ ತುಳುನಾಡಾಯಿತು.ಈ ದನಕಾರರ ಹಳ್ಳಿಯ ನಾಡಿಗೆ "ಪಾಡಿ" ಎಂಬುದಾಗಿ ಕರೆದಿರುವುದರಿಂದ ಅಂತ ಹಳ್ಳಿಗಳು ಕೆದಂಬಾಡಿ, ಬೆಳ್ಳಿಪಾಡಿ, ಕಾಸ್ಪಾಡಿ, ಮಡಪ್ಪಾಡಿ, ದೋಲ್ಪಾಡಿ, ಚೊಕ್ಕಾಡಿ, ಉದಾಹರಣೆಯಾಗಿದ್ದು ಈ ಹೆಸರು ಈಗಲೂ ಮನೆತನಕ್ಕಿರುವುದು, ಇಂತಹ ಹೆಸರಿನ ಕೆಲವು ಮನೆಗಳನ್ನು ನಾವು ಕೊಡಗಿನಲ್ಲಿ ನೋಡುತ್ತೇವೆ. ಅದರಲ್ಲಿ ಬಂದ ಹಿಂದಿನ ಮೂಲ ಮನೆಗಳು ಇಲ್ಲಿ ಈ ಊರು, ಮಣ್ಣು,ನೆಲೆ ಭಾಷೆಗೆ ತಕ್ಕಂತೆ ತಮ್ಮ ಮನೆಯ ಹೆಸರನ್ನು ನಾಮಕರಣ ಮಾಡಿಕೊಂಡಿದೆ. ಕೊಡಗು ರಾಜರ ಕಾಲದಲ್ಲಿ ಹಾಲೇರಿಯಿಂದ ಬಂದ ಅಪರಂಪರ ಸ್ವಾಮಿಗೆ ಕೆದಂಬಾಡಿ ಮನೆತನದ ಪಟೇಲ ಊರು ಗೌಡರು ತಮ್ಮ ಮಗಳನ್ನು ಕೊಟ್ಟಿರುವ ಮಾಹಿತಿ ಇದೆ.

ಕಲ್ಯಾಣ ಚಾಲುಕ್ಯರ ಶಾಸನಗಳಲ್ಲೊಂದಾದ ಎರಡನೆ ಜಗದೇಕ ಮಲ್ಲನ ಋಷ್ಯಶೃಂಗದ (ಶಿರಕಂಗಿ ಸಾದತ್ತಿ ತಾಲೂಕು) ಬೆಳಗಾಂ ಜಿಲ್ಲೆ ಕ್ರಿ.ಶ. 1148 ರ ಶಾಸನದಲ್ಲಿ ಅಲ್ಲಿನ ಊರಿನ ಗಾಂವುಡರು(ಗೌಡರು) ಭೂದಾನ ಮಾಡಿದ ದಾಖಲೆ ಇದೆ ಎಂದು ಹೇಳುತ್ತಾರೆ. ಈ ಗೌಂಡರಲ್ಲಿ ಕೆಲವರು ತೊಳಪ ಕುಲಕ್ಕೆ ಸೇರಿದವರೆಂದು ನಮೂದಿಸಲ್ಪಟ್ಟಿದೆ. ಈ ಕುಲದವರ ಹೆಸರು ವಿಜಯನಗರದಲ್ಲಿ

ಅಲ್ಲಿಲ್ಲಿ ಕಂಡುಬುತ್ತದೆಂದು ಅನುಮೋದಿಸಲಾಗಿದೆ.ಕೊಡಗು ರಾಜರು ಕೊಡಗಿನಲ್ಲಿ ನೆಲೆಸಿದ ಗೌಡರಿಗೆ ಕೊಟ್ಟ ನಿರೂಪದಲ್ಲಿ ತುಳುವ ಎಂಬುದಾಗಿ ನಮೂದಿಸಲಾಗಿದೆ.

ಈ ಗೌಡು ತುಳುನಾಡಿನಿಂದ ಬಂದುದ್ದಕ್ಕೆ ತುಳುವರಾದರೋ ಅಥವಾ ಪ್ರೊ॥ ದಿ ಗುರುರಾಜ ಭಟ್ಟರು ಹೇಳುವ ರೀತಿಯಲ್ಲಿ ಇವರಿಗೆ ತುಳುವ ಎಂಬ ಹೆಸರು ಬಂದಿತೋ ಎಂಬುವುದಾಗಿ ಅನುಮಾನಿಸಬೇಕಾಗಿದೆ. ದಕ್ಷಿಣ ಜನರು ಈಗಲೂ ಮಾತನಾಡುತ್ತಿರುವ ಭಾಷೆ ಹಳೆಗನ್ನಡವಾಗಿರುವಾಗ ಇವರು ವಿಜಯನಗರದ ಕೃಷ್ಣದೇವರಾಯನು ತುಳುವ ವಂಶಕ್ಕೆ ಸೇರಿದವನಾದರೂ ಅವನು ಕನ್ನಡ ಭಾಷೆ ಮಾತನಾಡುತ್ತಿದ್ದನೆಂದು ಚರಿತ್ರೆಯಲ್ಲಿ ಬರುತ್ತದೆ.ಹಾಗಿರುವಾಗ ಭಾಷೆಗೂ ಕುಲಕ್ಕೂ ಯಾವ ಸಂಬಂಧವಿಲ್ಲದಂತಾಯಿತು.

ನಮ್ಮಲ್ಲಿ ಕೆಲವು ಹಿರಿಯರು ದಕ್ಷಿಣ ಕನ್ನಡ ಮತ್ತು ಕೊಡಗಿನ "ಗೌಡರು" ಐಗೂರು ಸೀಮೆಯಿಂದ ಬಂದರೆಂದು ಹೇಳುತ್ತಾರೆ. ಐಗೂರು ಹಾಸನ ಜಿಲ್ಲೆಯಲ್ಲಿದೆ ಭಾಷೆಯನ್ನು ನೋಡಿದಾಗ ಹೋಲಿಕೆ ಇಲ್ಲದ ಕಾರಣ ಇಕ್ಕೇರಿ ವಂಶದ ಕಾಲದಲ್ಲಿ ಐಗೂರಿನ ಸುತ್ತಮುತ್ತಲಿನ ಸ್ಥಳಕ್ಕೆ ಬೇರೆಡೆಯಿಂದ ಬಂದು ನೆಲೆಸಿ ನಂತರ ದಕ್ಷಿಣ ಕನ್ನಡಕ್ಕೆ ಹೋಗಿರಬಹುದೆಂದು ಅರ್ಥವಾಗುವುದು. ಜನಾಂಗದ ಬಡತನಕ್ಕೆ ಕಾರಣ ಪರಕೀಯರ ದಾಳಿ ಮತ್ತು ತೊಂದರೆ ಇವರಿಗೆ ತಟ್ಟಿರಬಹುದು.

ಗೌಡ ಜನಾಂಗದ ಉನ್ನತ ಸಂಸ್ಕೃತಿಗೆ ಮದುವೆ ಹಬ್ಬಗಳಲ್ಲಿನ ಸೋಭಾನೆ ಇದು ಜನಪದ ವರ್ಗಕ್ಕೆ ಸೇರಿರುವುದುದು. ಇದು ಒಂದು ಜನಾಂಗದ ಸಂಸ್ಕೃತಿಯ ಹೃದಯದಿಂದ ಮೂಡಿ ಬಂದು ಇಂದಿನ ತಲೆಮಾರಿನವರೆಗೂ ಹರಿದು ಬಂದ ಸಾರಸತ್ವ ಸಂಪತ್ತು. ಹಿಂದೂ ಸಮಾಜದ ವೈಭವಯುತವಾದ ಮದುವೆ ಸಂಪ್ರದಾಯಗಳು ಗೌಡಗಜನಾಂಗದಲ್ಲಿ ಇದೆ. ಹೆಣ್ಣಿನ ಮದುವೆ ಶೃಂಗಾರದಲ್ಲಿ ಮುತ್ತಿನ ಚೆಂಡು ಮೂವತ್ತೂ ನವಲಕ್ಕಿ ಹವಳದ ಚೆಂಡು ಹದಿನಾರು ನವಲಕ್ಕಿ, ವಸ್ತ್ರಲಂಕಾರದಲ್ಲಿ ಹನ್ನೆರಡು ವರಹದ ಪಟ್ಟೆಸ್ಯಾಲೆ, ಬೊಟ್ಟು ಕುಚ್ಚದ ರವಕೆ ಅಂದಿನ ಗೌಡ ಜನಾಂಗದ ವೈಭವೀಕರಣಕ್ಕೆ ಸಾಕ್ಷಿ . ಬಡವರಾದರೂ "ಎರವಿನ" ವಿಧಾನದಿಂದಾದರೂ ಹೆಣ್ಣನ್ನು ಶೃಂಗರಿಸುತ್ತಿದ್ದರು. ಇದು ಈಗಲೂ ಪ್ರಚಲಿತ. ಇದು ಕೇವಲ ಹಾಡಾಗಿರದೆ ವಿಜಯನಗರದ ಕಾಲದ ಶ್ರೀ ತ್ರಿವಿಕ್ರಮನ ಆಭರಣಗಳ ಪಟ್ಟಿಯಿಂದ ಖಚಿತವಾಗಿದೆ. ಆಗಿನ ಕಾಲದ ಬಳಕೆಯ ಆಭರಣಗಳೆಂದರೆ ಮಾಂಗಲ್ಯ, ತಾಯತ ಮುತ್ತಿನ ಪದಕ ಹಾರ, ಮೋಹನ ಸರ, ಕಟ್ಟಣಿ, ಮುತ್ತಿನ ವಾಲೆ, ಬೆರಳುಂಗರ, ಪಂಡೆಯ ಮಣಿದಾಮ ಅಥವಾ ಡಾಬು ದುಂಡು ಮುತ್ತಿನ

ಕೊರಳ ಹಾರ, ಚಿನ್ನದ ಸರ, ಕಂಕಣ ತೋಳ ಬಳೆಗಳು, ದುಂಡು ಹವಳದ ಕೈಕಟ್ಟು ಮದ್ರಿಕೆ, ಹೊಸ ಕುಂದಣ ಚಳ ತುಂಬು, ಜಡೆ ಭಂಗಾರ, ಹೊಂಗ್ಯಾದಿಗೆ ಬಂಗಾರದ ಹರಳಿನ ಕಟ್ಟೇ, ಮುತ್ತಿನ ಮೂಗುತಿ, ಕೆತ್ತಿದ ವಾಲೆ, ಇತ್ತೆರ ಬುಗುಡಿ, ನೆತ್ತಿಗೆ ಅರಳೆಲೆ, ಚಿತ್ರದ ರ್‍ಯಾಗಟೆ, ಹಸ್ತ ಕಡಗ, ಚೂಡ್ಯವಂಕಿ, ರತ್ನದ ಪದಕ ಮುಂತಾದವುಗಳಿದ್ದವು.ಇಂದು ಇಂತಹ ಬಹಳಷ್ಟು ಪದಗಳು ಬಳಕೆಯಿಂದ ದೂರ ಸರಿದಿದೆ.

ದೇವತಾರಾಧನೆಯಲ್ಲಿ ಕುಲಗುರು ವೆಂಕಟರಮಣ,ಮದುವೆ ಸಂದರ್ಭದಲ್ಲಿ ಸುಬ್ಬಮ್ಮ ದೇವರಿಗೆ ಹರಕೆ, ಗಂಗೆ ಪೂಜೆ ಕಾಳಿ, ಚಾಮುಂಡಿ, ವಿಷ್ಣುಮೂರ್ತಿ ಪೂಜೆ ಹಿಂದಿನಿಂದಲು ನಡೆದುಕೊಂಡು ಬಂದಿದೆ. ಸಿಂಧೂ ನದಿಯ ನಾಗರಿಕತೆಯಲ್ಲಿ ಮಾತೃದೇವತೆಯನ್ನು ಪೂಜಿಸುತ್ತಿದ್ದು ಅದು ಗೌಡ ಜನಾಂಗದ ಮಹಾಮಾತೆಯನ್ನು ಆರಾಧಿಸುವ ಸಂಸ್ಕೃತಿಯ ಮೇಲೆ ಬೆಳಕು ಚೆಲುತ್ತದೆ.

ಹರಪ್ಪ ಮತ್ತು ಮೊಹೆಂಜದಾರೋ ಜನರು ಪಶುಪತಿಯನ್ನು ಪೂಜಿಸುತ್ತಿದ್ದರು. ಪಶು ಪತಿ ಶಿವ, ಗೋವಳ ಅಥವಾ ಗೌಡ ಜನಾಂಗದವರು ಹಾಲಿನೊಂದಿಗೆ ನಿಕಟ ಸಂಬಂಧ ಉಳ್ಳವರಾಗಿದ್ದರು. ಇವರು ವೃಷಭ ಪೂಜೆಯನ್ನು ಮಾಡುತ್ತಿದ್ದರು.ಇವರು ಶಿವಭಕ್ತರಾಗಿದ್ದರು ಶಿವನ ಪತ್ನಿ ಗಿರಿಜೆಯನ್ನು, ಗಂಗೆಯನ್ನು ಪೂಜಿಸುತ್ತಿದ್ದರೆಂಬುದಕ್ಕೆ ಇಂದು ಮದುವೆಯಲ್ಲಿ ಕಂಡು ಬರುವ ಗಂಗೆ ಪೂಜೆಯು ಇದಕ್ಕೆ ಸಾಕ್ಷಿಯಾಗಿ ಮುಂದುವರಿಯುತ್ತಿದೆ.

ದಕ್ಷಿಣ ಕನ್ನಡ ಜಿಲ್ಲೆಯ ಈಗಿನ ಪುತ್ತೂರು ಸುಳ್ಯ ತಾಲೂಕುಗಳಿಂದ ಕೊಡಗಿಗೆಗ ಗೌಡ ಜನಾಂಗದವರು ಇಲ್ಲಿ ನೆಲೆಸುವಂತೆ ಮಾಡಿದವರು ಕೊಡಗಿನ ಹಾಲೇರಿ ಅರಸರಲ್ಲಿ ಪ್ರಖ್ಯಾತನಾದ ದೊಡ್ಡ ವೀರ ರಾಜೇಂದ್ರ ಒಡೆಯರು. ಇದರ ಹಿನ್ನೆಲೆ ಹೀಗಿದೆ, ಈಗಿನ ಸುಳ್ಯ ಮತ್ತು ಅಮರ ಮಾಗಣೆಗಳು ಸುಮಾರು 1700 ರಲ್ಲಿ ಕೊಡಗಿನ ಆಗಿನ ರಾಜ ದೊಡ್ಡ ವೀರಪ್ಪ ಒಡೆಯರಿಗೆ ಇಕ್ಕೇರಿಯ ಸೋಮಶೇಖರ ನಾಯಕದಿಂದ ಕೊಡಲ್ಪಟ್ಟವು. ಈ ಎರಡು ಮಾಗಣೆಗಳು ಆ ಸಮಯದಿಂದ 1775 ರವರೆಗೆ ಕೊಡಗು ರಾಜರ ಸ್ವಾಧೀನದಲ್ಲಿದ್ದವು. ಈ ಸಮಯದಲ್ಲಿ ಅಮರ ಸುಳ್ಯದ ಜನರೆಲ್ಲರೂ ಕೊಡಗು ರಾಜರ ಪ್ರಜೆಗಳಿಗೆ ಘಟ್ಟದ ಮೇಲೆ ನೆಲೆಸಲು ಪ್ರೋತ್ಸಾಹವಾಗಲೀ ಒತ್ತಾಯವಾಗಲೀ ರಾಜರ ಕಡೆಯಿಂದ ಇರಲಿಲ್ಲ.1775 ರಲ್ಲಿ ಮೈಸೂರಿನ ಹೈದರಾಲಿ ಅಮರಸುಳ್ಯ ಮಾಗಣೆಯನ್ನು ಕೊಡಗು ರಾಜರಿಂದ ಕಿತ್ತುಕೊಂಡು 1780 ವೀರಾಜೇಂದ್ರ

ಒಡೆಯರನ್ನು ಸರೆಯಲ್ಲಿಟ್ಟನು. ಹೈದರಾಲಿಯ ಮರಣದ ನಂತರ ಆತನ ಮಗ ಟಿಪ್ಪು ಸುಲ್ತಾನನು ಆತನ ಮೇಲೆ ದಂಗೆ ಎದ್ದು, ಕೊಡಗಿನ ಜನರನ್ನೆಲ್ಲಾ ಬಂದಿಸಿ ಶ್ರೀರಂಗಪಟ್ಟಣದಲ್ಲಿ ಸೆರೆಯಲ್ಲಿಟ್ಟ. ಅವರ ಸಂಖ್ಯೆ ಸುಮಾರು 80,000. 1778 ರಲ್ಲಿ ಪಿರಿಯಾಪಟ್ಟಣ ಕೋಟೆಯಿಂದ ತಪ್ಪಿಸಿಕೊಂಡು ಬಂದ ವೀರರಾಜೇಂದ್ರ ಒಡೆಯನು ಮಲೆಕಾಡುಗಳಲ್ಲಿ ಸೈನ್ಯ ಸಂಘಟನೆ ಮಾಡಿ ಸುಲ್ತಾರನರನ್ನು ಕೊಡಗಿನಿಂದ ಓಡಿಸಿದನು. ನಂತರ ಬ್ರಿಟಿಷರ ನೆರವಿನೊಂದಿಗೆ 1792 ರಲ್ಲಿ ಸುಳ್ಯ ಮಾಗಣೆ ವೀರರಾಜೇಂದ್ರನ ವಸಕ್ಕೆ ಬಂದಿತು. ಕೊಡಗಿನಲ್ಲಿ ವ್ಯವಸಾಯ ಮಾಡಲು ಜನರಿಲ್ಲದ ಕಾರಣಕ್ಕೆ ಅಮರ ಸುಳ್ಯ ಪುತ್ತೂರು ಕಡೆಗಳಿಂದ,ಮೋಡಣ ಸೀಮೆಗಳಿಂದ ಜನರನ್ನು ತಂದು ಭೂಮಿಯನ್ನು ಜಮ್ಮ ಮತ್ತು ಉಂಬಳಿಯಾಗಿ ಕೊಟ್ಟನು ಇದರಲ್ಲಿ ಇತರ ಜನಾಂಗದವರೊಂದಿಗೆ ಗೌಡ ಜನಾಂಗದವರಿದ್ದು ಕೊಡಗಿನಲ್ಲಿ ಗೌಡ ಜನರು ದಕ್ಷಿಣ ಕನ್ನಡ ಜಿಲ್ಲೆಯ ಗಡಿಗೆ ಮುಟ್ಟಿಸಿಕೊಂಡಿರುವ ಭಾಗಮಂಡಲ ನಾಡು, ನಾಪೊಕ್ಲು ನಾಡು, ಮಡಿಕೇರಿ ನಾಡುಗಳಲ್ಲಿ ಹೆಚ್ಚಾಗಿ ನೆಲಸಿದರು. 1799ರಿಂದ 1808 ವರೆಗೆ ಹೆಚ್ಚಾಗಿ ಬಂದು ಗೌಡ ಜನಾಂಗದವರು ನೆಲಸಿದರು ಹಾಗೆ ಅವರಿಗೆ ಭೂಮಿ ಕೊಟ್ಟ ಸಂಬಂಧದ ನಿರೂಪಗಳಲ್ಲಿ ಕೆಲವನ್ನು ಇಲ್ಲಿ ನೋಡಬಹುದು.

"ಮಹರಾಜ ವೀರರಾಜೇಂದ್ರ ಒಡೆಯನ ಸಂಸ್ಥಾನ ಕೊಡಗು, ಬೆಂಗನಾಡು, ಶೆಟ್ಟಿಮಾನಿ, ನಾಟ ಪೈಕಿ, ಕುಂದಚೇರಿ ಗ್ರಾಮದಲ್ಲೂ ಇರುವ ಸುಳ್ಯದ ಗ್ರಾಮ ಕೆದಂಬಾಡಿ ತುಳುವರ ಸಂಣಗೆ ಅಪ್ಪಣೆ ದಯ ಪಾಲಿಸಿದ ಸನದು ಬುದ್ಧಿ ನಿರೂಪ ಆದಾಗಿ ಯಾಗ ನಿನಗೆ ಹೊಸ್ತಾಗಿ ಗಟ್ಟಿ ಜಂಮಕ್ಕೆ ಅಪ್ಪಣೆ ಕೊಡಿಶಿರುವುದು.ಯೀನಾಡುಯಿದೆ ಗ್ರಾಮದಲ್ಲಿ ಕುಳ ನಷ್ಟವಾದ ಬೆಳ್ಳಿ ಮುಕ್ಕಾಟಿ ಭೂಮಿ ಪ್ರಾಕು ಕೇಳಿ ಭಟ್ಟಿ 300 ಯಿದಕ್ಕೆ ಸೇರಿದ ಮನೆದಳ ತೋಟ ತುಡಿಕೆ ಮುಂತಾಗಿ ಅರಮನೆ ತರದಿಂದ ನಿನಗೆ ಗಟ್ಟಿ ಜಮ್ಮಕ್ಕೆ ಕೊಡಿಯಿಸಿರುವುದರಿಂದ ಈ ಭೂಮಿಯನ್ನು ನಿನ್ನ ಪುತ್ರ ಪೌತ್ರ ಪಾರಂಪರ್ಯವಾಗಿ ಅನುಭವಿಸಿಕೊಂಡು ಈ ಭೂಮಿ ಯಿಂದ ಅರಮನೆಗೆ ಬರತಕ್ಕ ಉಂಬಳಿಕಾಣಿಕೆಯನ್ನು ಕಾಲಕಾಲಂ ಪ್ರತಿಯುಲ್ಲು ಅರಮನೆಗೆ ಒಪ್ಪಿಸುತ್ತಾ ಸ್ವಾಮಿಕಾರ್ಯ ಮುಖ್ಯವಾಗಿ ನಡೆಸಿಕೊಳ್ಳುವುದಾಗಿಯೆಂಬ ಸನದು ನಿರೂಪ ಬುದ್ಧಿ ನಿರೂಪ ಆದಾಗಿ–ಯಾಗ ನಿನಗೆ ಹೊಸ್ತಾಗಿ ಗಟ್ಟಿ ಜಂಮಕ್ಕೆ ಅಪ್ಪಣೆ ಕೊಡಿಶಿಯಿರುವುದು.

ಯೀನಾಡುಯಿದೆ ಗ್ರಾಮದಲ್ಲಿ ಕುಳ ನಷ್ಟವಾದ ಬೆಳ್ಳಿ ಮುಕ್ಕಾಟಿ ಭೂಮಿ

ಪ್ರಾಕು ಕೇಳಿ ಭಟ್ಟಿ 300....ಯಿದಕ್ಕೆ ಸೇರಿದ ಮನೆ ದಳ ತೋಟ ತುಡಿಕೆ ಮುಂತಾಗಿ ಅರಮನೆ ತರದಿಂದ ನಿನಗೆ ಗಟ್ಟಿ ಜಮ್ಮಕ್ಕೆ ಕೊಡಿಯಿಸಿರುವುದರಿಂದ ಈ ಭೂಮಿಯನ್ನು ನಿನ್ನ ಪುತ್ರ ಪೌತ್ರ ಪಾರಂಪರ್ಯವಾಗಿ ಅನುಭವಿಸಿಕೊಂಡು ಈ ಭೂಮಿ ಯಿಂದ ಅರಮನೆಗೆ ಬರತಕ್ಕ ಉಂಬಳಿಗಾಣಿಕೆಯನ್ನು ಕಾಲಕಾಲಂ ಪ್ರತಿಯುಲ್ಲು ಅರಮನೆಗೆ ಒಪ್ಪಿಸುತ್ತಾ ಸ್ವಾಮಿಕಾರ್ಯ ಮುಖ್ಯವಾಗಿ ನಡೆಸಿಕೊಳ್ಳುವುದಾಗಿ ಯೆಂಬ ಸನದು ನಿರೂಪಕ್ಕೆ ಅಪ್ಪಣೆ ಪ್ರಕಾರ ಕಲಿಸಂದ 4907 ಕ್ರೋಧ ಸಂ.1 ಮಾರ್ಗಶಿರ ತಾರೀಕು 26ನೇ ಮಂಗಳವಾರ ಬರದಂತಾ ಕಾಸಾ ರಹಸ್ಯದ ಕಳು ಕಲಿ 4907ನೇ ಸಂವತ್ಸರ ಮಾರ್ಗಶಿರವೆಂದರೆ ಕ್ರಿ.ಶ.1805 ನೇ ಇಸವಿ ಡಿಸೆಂಬರ್ ತಿಂಗಳಾಗುತ್ತದೆ. ಇದೇ ರೀತಿ ದೊಡ್ಡ ವೀರರಾಜೇಂದ್ರ ಒಡೆಯನು ಈ ಕೆಳಗಿನ ಗೌಡ ಜನರಿಗೆ ಕೊಡಗಿನಲ್ಲಿ ಭೂಮಿಯನ್ನು ಜಂಮವಾಗಿ ಕೊಟ್ಟಿದ್ದು ಕಂಡುಬರುತ್ತದೆ.

ಕುಂದಚ್ಚೇರಿ ಗ್ರಾಮದಲ್ಲೂ ದಬ್ಬಡಕದ ತುಳುವ ಬೆಟ್ಟನ ಬೆಳಿಯಗೆ ಕುಳ ನಷ್ಟವಾದ ಬೆಳಂಚಂಡ ಭೂಮಿ ಪ್ರಾಕ ಕೇಳಿ ಭಟ್ಟಿ 300. ಸುಳ್ಯದ ಸೀಮೆ ಬೆಳಕಜೆ ಸುಬ್ಬಯಗೆ ಮೂರು ನಾಡು ಕಾಂತೂರು ಗ್ರಾಮದಲ್ಲಿ ಭೂಮಿ. ಮುತ್ತಾರ್ಮುಡಿ ಗ್ರಾಮದಲ್ಲಿರುವ ಸುಳ್ಯದ ಸೀಮೆ ಅರಂತೋಡು ಮಾಗಣೆ ಪಾರಮಜಲು ತುಳುವರ ತಿಮ್ಮಪ್ಪಗೆ ಕುಳ ನಷ್ಟವಾಗಿರುವ ಕುಳಕಂಡರ ಭೂಮಿ 250 ಭಟ್ಟಿ, ಬೆಳರ ಚಟ್ಟಿ ಭೂಮಿ 250 ಭಟ್ಟಿ ಉಲುಗುಲಿ ಮೂಡಗೇರಿ ನಾಡು ಪಯಕಿ ಅತ್ತೂರು ಗ್ರಾಮದಲ್ಲೂ ಇರುವ ಸುಳ್ಯದ ಶೀಮೆ ಪೇರಾಲು ತುಳುವರ ಚೆಟ್ಟಿನ ಮೋಟಗೆ ಇದೇ ಗ್ರಾಮದಲ್ಲಿ ಕುಳ ನಷ್ಟವಾಗಿರುವ ಬೈಚೆಟ್ಟಿರ ಭೂಮಿ ಭಟ್ಟಿ 300. ಹೀಗೆ ಉಳುವಾರನ ಕೃಷ್ಣನಿಗೆ, ದೇರಜೆ ಸುಬ್ಬುವಿಗೆ ಭೂಮಿ ಕೊಟ್ಟಿರುವುದು ಕಂಡುಬರುತ್ತದೆ. ಇದಲ್ಲದೆ, ಕೊಡಗಿನಲ್ಲಿ ಈಗ ಭೂಮಿ ಮನೆ ಮಾಡಿಕೊಂಡಿರುವ ಎಲ್ಲಾ ಗೌಡ ಜನಾಂಗದವರಿಗೆ ಹಾಲೇರಿ ಅರಸರು ಜಮ್ಮ ಭೂಮಿ ಕೊಟ್ಟಿರುವರು. 1834 ರಲ್ಲಿ ಕೊಡಗು ಬ್ರಿಟಿಷರ ಕೈವಸವಾಯಿತು. ಚಿಕ್ಕ ವೀರರಾಜೇಂದ್ರ ಪದಚ್ಯುತಗೊಂಡು ಮಗಳೊಂದಿಗೆ ವಾರಣಾಸಿಯಲ್ಲಿದ್ದನು. ಮುಂದೆ 1835 ಮತ್ತು 1857 ರಲ್ಲಿ ಅಪರಂಪರ ಮತ್ತು ಕಲ್ಯಾಣಸ್ವಾಮಿ ಬ್ರಿಟಿಷರ ವಿರುದ್ಧ ಹೋರಾಟಕ್ಕೆ ನಿಂತರು. ಸುಳ್ಯದ ಕೆದಂಬಾಡಿ ರಾಮಗೌಡ ಮತ್ತು ಬಲಮುರಿಯ ಗುಡ್ಡೆಮನೆ ಅಪ್ಪಯ್ಯಗೌಡರೂ ಬ್ರಿಟಿಷರ ವಿರುದ್ಧ ಸೆಟೆದು ನಿಂತರು. 1877 ರಲ್ಲಿ ಕೊಡಗನ್ನು ಮದ್ರಾಸ್ ಪ್ರಾಂತ್ಯಕ್ಕೆ ಸೇರಿಸಬೇಕೆಂದಾಗ ಬೈರೆಟ್ಟಿರ

ರಾಮಪಯ್ಯ, ನಿಡ್ಯಮಲೆ ಮುತ್ತಣ್ಣ, ಶಿರಕಜೆ ಪೊನ್ನಪ್ಪ, ಬಳ್ಳಡ್ಕ ದೇವಪ್ಪ, ಕುದುಪಜೆ ದೇರಪ್ಪ,ಕೋಚನ ಸಣ್ಣಯ್ಯ ಇದನ್ನು ವಿರೋಧಿಸಿದ ಮುಖ್ಯಸ್ಥರು.ಭಾರತ ದೇಶವು ಪ್ರಜಾಪ್ರಭುತ್ವವಾದ ಮೇಲೆ 1955ನೇ ಸಾರ್ವತ್ರಿಕ ಚುನಾವಣೆಯಲ್ಲಿ ಕೊಡಗಿನ ವಿಧಾನ ಸಭೆಗೆ ಕೋರನ ದೇವಯ್ಯ ಮತ್ತು ಪಾಂಡನ ಸುಬ್ಬಯ್ಯನವರು ಜನರಿಂದ ಆರಿಸಲ್ಪಟ್ಟರು. ಕೋರನ ದೇವಯ್ಯನವರು ವಿಧಾನ ಸಭೆಯ ಉಪಾಧ್ಯಕ್ಷರಾಗಿ ಆರಿಸಲ್ಪಟ್ಟರು. 1956 ರಲ್ಲಿ ಕೊಡಗು ಮೈಸೂರು ರಾಜ್ಯದಲ್ಲಿ ವಿಲೀನವಾದ ಮೇಲೆ ಕೂಡ ಕೋರನ ದೇವಯ್ಯನವರು ಮೈಸೂರು ವಿಧಾನ ಸಭೆ ಆರಿಸಲ್ಪಟ್ಟರು. ಸಾತಂತ್ರ್ಯ ಚಳುವಳಿಯಲ್ಲಿ ದುಡಿದ ಮಹನೀಯರಲ್ಲಿ ಗೌಡಜನಾಂಗಕ್ಕೆ ಸೇರಿದವರು ಕೆದಂಬಾಡಿ ಸುಬ್ರಾಯ, ತೆಕ್ಕಡ ಸುಬ್ಬಯ್ಯನವರು 1921 ರಲ್ಲಿ ಜನ ಜಾಗ್ರತಿಗಾಗಿ "ಕೊಡಗು ಪತ್ರಿಕೆ" ಯನ್ನು ಪ್ರಾರಂಬಿಸಿದವರು. ಸತ್ಯಗ್ರಹದಲ್ಲಿ ಭಾಗವಹಿಸಿದವರು ಶ್ರೀ ಪೂಜಾರಿ ರಾಮಪ್ಪ, ಕೋಚನ ಅಪ್ಪಯ್ಯನವರು. ಗಾಂಧೀಜಿಯವರ ಹರಿಜನೋದ್ಧಾರ ಕಾರ್ಯಕ್ರಮದಲ್ಲಿ ನಿಡ್ಯಮಲೆ ಸೋಮಣ್ಣನವರು ಭಾಗವಹಿಸಿದ್ದರು. ಕೆದಂಬಾಡಿ ಗಣಪತಿಯವರು ಕೂಡ ಸ್ವಾತಂತ್ರ್ಯ ಹೋರಾಟಗಾರರಾಗಿದ್ದರು.

ಅವಿಭಕ್ತ ಕುಟುಂಬವಾಗಿದ್ದ ಗೌಡ ಜನಾಂಗ ಒಂದೇ ಸೋರಿನಲ್ಲಿ ಒಂದೆ ಅಡುಗೆಯಲ್ಲಿ ಜೀವಿಸುತ್ತಿದ್ದರು. ಈ ಗೌಡರ ಮೂಲ ಮನೆ ಯನ್ನು "ಐನ್ಮನೆ" ಎನ್ನುವರು.ಇದರ ಹಕ್ಕು ಕುಟುಂಬದ ಎಲ್ಲಾ ಸದಸ್ಯರಿಗಿರುತ್ತದೆ. ಉಂಬೊಳಗೆ, ಬಾಡೆ,ಕಯ್ಯಾಲೆ ಕೊಂಬರೆ,ಕುಂಞಿ ಬಾಡೆ, ಪತ್ತಾಯ, ಅಟ್ಟ ಇದ್ದು ಅಟ್ಟದಲ್ಲಿ ಶ್ರೀ ವೆಂಕಟರಮಣನ ಮುಡುಪು ಇರುವುದು. ಬಾಡೆಯಲ್ಲಿ ದೀಪ ಉರಿಸಿ ಎಲ್ಲಾ ಕಾರ್ಯಗಳು ನಡೆಯುತ್ತದೆ.ಇದನ್ನು "ನೆಲ್ಲಕ್ಕಿ" ಎಂದು ಕರೆಯುವರು. ಕಯ್ಯಾಲೆಯಲ್ಲಿ "ಐಮರ" (ಕೂರಲು ವಿಶಾಲವಾದ ಮರದ ಹಲಗೆ)ಇದ್ದು ಇಲ್ಲಿ ಕುಟುಂಬದ ಸಭೆ ಹಿರಿಯರ ಸಮ್ಮುಖದಲ್ಲಿ ನಡೆಯುತ್ತಿತ್ತು. ಕುಟುಂಬದ ಹಿರಿಮನೆ ಪಟ್ಟೆದಾರ ಐಮರದಲ್ಲಿ ಕೂರುವ ವಿಶೇಷ ಪೀಠ ಪಟ್ಟೆದಾರನಿನಿಗಿದ್ದು ಇದರಲ್ಲಿ ಇನ್ನಿತರರು ಕೂರುವಂತಿಲ್ಲ. ಐಮರದಲ್ಲಿ ಹೆಂಗಸರು ಕೂರುವಂತಿಲ್ಲ. ಸತ್ತಾಗ ಸೂತಕ ಪದ್ಧತಿಯಿದ್ದು, ಆ ವೇಳೆಯ ನಿರ್ದಿಷ್ಟ ಸಮಯದ ವರೆಗೆ ಕುಟುಂಬದ ಹೊರಗಿನ ಸ್ಥಳಗಳಲ್ಲಿ ಇರಬೇಕಾಗಿತ್ತು.ಸೂತಕದ ವೇಳೆಯಲ್ಲಿ ಯಾವ ಶುಭ ಕಾರ್ಯವೂ ನಡೆಯುವಂತಿಲ್ಲ.

ಐನ್ ಮನೆಯು ಒಂದು ದೇವಾಲಯವಿದ್ದಂತೆ ಮೂಡಕ್ಕಿರುವ ಬಾಗಿಲು

ಕಿರಿದ್ದಾಗಿದ್ದು, ಬಲಿಷ್ಠವಾಗಿಯೂ, ಚಿತ್ತಾರಗಳಿಂದಲೂ ಕೂಡಿದ್ದು ಸೂರ್ಯ ಉದಯಕ್ಕೆ ಮುನ್ನ ತೆರೆದರೆ ಮತ್ತೆ ಮುಚ್ಚುವುದು ಸೂರ್ಯಾಸ್ತದ ನಂತರ. ಈಗಲೂ ಅಂತಹ ಐನ್‌ಮನೆಗೆ ಹೋದಾಗ ನಮ್ಮಲ್ಲಿ ಭಯ-ಭಕ್ತಿ ಹುಟ್ಟುವುದು.ಇಂದು ಇಂತಹ ಐನ್ ಮನೆಯನ್ನು ಜೀರ್ಣೋದ್ಧಾರ ಮಾಡಿ ಮುಂದಿನ ಪೀಳಿಗೆಗೆ ಉಳಿಸಿ ಬೆಳೆಸಿಕೊಂಡು ಹೋಗುವುದು ನಮ್ಮೆಲ್ಲರ ಕರ್ತವ್ಯವಾಗಿದೆ. ಆದರೆ ಇಂತಹ ಐನ್‌ಮನೆಯನ್ನು ಕೆಡವಿ ಅಲ್ಲಿ ಆರ್ ಸಿ ಸಿ ಮನೆ ನಿರ್ಮಿಸುವುದು ಒಂದು ದುರಂತ.

ಹಿಂದೆ ಪರಕೀಯರ ದಾಳಿಯಿಂದ ಆರ್ಥಿಕತೆ ಮತ್ತು ಜನಜೀವನದ ಮೇಲೆ ಪರಿಣಾಮ ಬೀರಿರುವ ಅಂಶ ಕಂಡು ಬಂದರೆ, ಇಂದು ಪರದೇಶಿಯ ಸಂಪ್ರದಾಯ, ಉಡುಗೆ-ತೊಡುಗೆ, ಆಚಾರ-ವಿಚಾರ, ಆಹಾರ-ವಿಹಾರಗಳು ಅತಿಕ್ರಮಣ ಮಾಡಿ ಮೂಲ ಸಂಸ್ಕೃತಿ, ಸಂಸ್ಕಾರಕ್ಕೆ ಕೊಡಲಿ ಪೆಟ್ಟು ಬಿದ್ದಿದೆ.ದುಷ್ಟ-ಅನಿಷ್ಟ ಪದ್ಧತಿ,ಮೂಡನಂಬಿಕೆಯನ್ನು ಬಿಡುವುದು ಇಂದಿನ ವೈಜ್ಞಾನಿಕ ಯುಗದಲ್ಲಿ ಸರಿ. ಆದರೆ ವೈಜ್ಞಾನಿಕ ವಿವೇಚನೆಯಲ್ಲಿರುವ ವಿಧಾನಗಳು ಆರೋಗ್ಯ, ಮನಸ್ಸು, ಬದುಕು, ಆಯಸ್ಸು, ಯೋಗ ಮುಂತಾದವುಗಳ ಅಂಶಗಳಿಗೆ ಅಮೂಲ್ಯವಾದ ಜ್ಞಾನವಾಗಿ ಹರಿದಿದೆ. ಆದರೆ ಅದನೆಲ್ಲಾ ಬಿಟ್ಟು ಗೌಡ ಜನಾಂಗ ಐಸಾರಾಮದ ಬದುಕಿನೊಂದಿಗೆ ತನ್ನತನವನ್ನು ಕಳೆದುಕೊಳ್ಳುತ್ತಿದೆ. ನಾಲಗೆಗೆ ವ್ಯಾಯಾಮವನ್ನು ನೀಡುವ ಅರೆಭಾಷೆಯನ್ನು ಬಿಟ್ಟು ಬಾಯಿಯಿಂದ ಜಾರಿ ಹೋಗುವ ಭಾವನೆಯನ್ನು ಕೊಲ್ಲುವ ಇಂಗ್ಲೀಷ್ ಭಾಷೆಯನ್ನು ಮಾತನಾಡುವುದು ತಾವು ಸಂಪ್ರದಾಯ ಬದ್ಧ ಗೌಡ ಜನಾಂಗಕ್ಕಿಂತಲೂ ದೊಡ್ಡವರೆಂದು ತಿಳಿದುಕೊಳ್ಳುತ್ತಾರೆ. ಸಂಬಂಧಗಳು ದೂರವಾಗಿದೆ, ಹಿಂದೆ ಇದ್ದ ಸಂಬಂಧಗಳ ಚಾಚ ಹೇಳಿ ಕರೆಯುವುದನ್ನು ಬಿಟ್ಟು ಅಜ್ಜಿ-ತಾತನವರೆಗೂ ಎಲ್ಲರೂ ಅಂಕಲ್-ಆಂಟಿ. ಇತರ ಭಾಷೆ ಕಲಿಯಲಿ ಮಾತನಾಡಲಿ ಆದರೆ ಮೂಲಭಾಷೆ ಬಿಡದಿರಲಿ. ನಮ್ಮ ಗೌಡ ಜನಾಂಗ. "ಒಂದು ಜಾತಿ, ಜನಾಂಗ, ಸಂಬಂಧವನ್ನು ಒಟ್ಟು ಗೂಡಿಸುವ ಸಾಧನವೆಂದರೆ ಭಾಷೆ". ಇದು ಅವರಲ್ಲಿ ಪ್ರೀತಿ, ಪ್ರೇಮ, ಅಭಿಮಾನ, ವಾತ್ಸಲ್ಯ, ಅನುಕಂಪ ಎಲ್ಲವನ್ನು ಪುಳಕಿತಗೊಳಿಸುವುದು. ಒಬ್ಬ ಗೌಡ ವ್ಯಕ್ತಿಯ, ಮತ್ತೊಬ್ಬ ಗೌಡ ವ್ಯಕ್ತಿಯು ನಡುವಿನ ಸೇತುಬಂಧವಾಗಿರುವುದು. ಸಂವಹನ ಭಾವನೆಗಳಿಗೆ ಅರ್ಥವಾಗುವುದು ಹಾಗೂ ಸ್ಪಂದಿಸುವುದು. ಇನ್ನೊಂದು ತಮಾಷೆಯ ವಿಚಾರವೆಂದರೆ ನಮ್ಮ ಗೌಡ ಜನಾಂಗದವರಲ್ಲದೆ ಇಲ್ಲಿನ ಇತರ ಮೂಲನಿವಾಸಿಗಳು

ಕೂಡ ತಮ್ಮ ಜಾತಿಯವರು ಕಂಡಾಗ ಕನ್ನಡ ಅಥವಾ ಇಂಗ್ಲೀಷ್ ಮಾತನಾಡುತ್ತಾರೆ. ಆದರೆ ಬೇರೆ ಜಾತಿಯವರು ಕಂಡಾಗ ಅವರದೆ ಭಾಷೆಯಲ್ಲಿ ಅವರ ಅಭಿಮಾನಗಳಿಸುವ ಹುಚ್ಚು ಪ್ರಯತ್ನ ಮಾಡುತ್ತಾರೆ. ಕಂಡಾಗ, ವ್ಯಾಪಾರಕ್ಕೆ ಬಂದಾಗ ಮಳೆಯಾಳ, ಹಿಂದಿ, ತೆಲುಗು ಹೀಗೆ ಮಾತೃಭಾಷೆ, ನಾಡಭಾಷೆಯನ್ನು ಬಿಟ್ಟು ಮಾತನಾಡುತ್ತಾರೆ.

ಇಂದು ಬಹುಮಟ್ಟಿಗೆ ಗೌಡಜನಾಂಗ ಮಾತನಾಡುವ ಭಾಷೆ ಬಳಕೆಯಲ್ಲಿ ರುವುದು ಭಾಗಮಂಡಲ,ಮದೆನಾಡು,ಗಾಳಿಬೀಡು,ಕಲ್ಲುಗುಂಡಿ,ಪೆರಾಜೆ ಕಡೆಗಳಲ್ಲಿ. ಶತಮಾನದ ಹಿಂದಿನ ಕೃಷಿ ಉಪಕರಣಗಳು, ಗೃಹಬಳಕೆಯ ಪರಿಕರಗಳು, ಉಡುಪುಗಳು, ಪದ್ಧತಿಗಳು, ಕಣ್ಮರೆಯಾಗುತ್ತಿದೆ. ಹಬ್ಬ ಹರಿದಿನಗಳು, ಮದುವೆ ಸಂಪ್ರದಾಯಗಳು ದೂರ ಸರಿಯುತ್ತಿದೆ. ಇಂತ ಸಂದರ್ಭದಲ್ಲಿ ಜನಾಂಗ ಎಚ್ಚೆತ್ತು ಅತ್ಯಮೂಲ್ಯವಾದ ಸಂಸ್ಕೃತಿಯ ಉಳಿವಿಗೆ ಮನಸ್ಸು ಮಾಡಲಿ ತಮ್ಮ ಜೀವನದ ಒಂದು ಭಾಗವನ್ನು ಅದಕ್ಕೆ ಮುಡಿಪಾಗಿಡಲಿ.

ಮಂಗಳ ಜಯ ಮಂಗಳ ರಂಗನಾಥನಿಗೆ।
ಸಂಭ್ರಮದಿಂದಲಿ ಮೂರು ಲೋಕದ ಪಾಲಕನಿಗೆ।
ನೀಲ ಮೇಘ ಕರುಣಪಾಲ ಕಮಲನಾಭಗೆ।
ರಂಗನಾಥ ಜಗದರಕ್ಷಕ ಜಯಮಂಗಳ ಹರಿಗೆ।

ಆಧಾರ : ಮಾಕೋನಹಲ್ಲಿ ದೊಡ್ಡಮನೆ ದೊಡ್ಡಪ್ಪ ಗೌಡರು
ಶ್ರೀ ಪೇರಿಯನ ಪೂವಯ್ಯನವರು
ಶ್ರೀ ಪೂಜಾರಿ ಮೊಣಪ್ಪ
ಶ್ರೀ ಕೃಷ್ಣಯ್ಯ

ಸಂಗ್ರಹ :
**ತಕ್ಕಡೆ ಬಿ. ಕುಮಾರ ಸ್ವಾಮಿ**
ಮುತ್ತಾರ್ಮುಡಿ

## ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ

ಅಧ್ಯಕ್ಷರು
**ಶ್ರೀ ಲಕ್ಷ್ಮೀನಾರಾಯಣ ಕಜೆಗದ್ದೆ**

**ಸದಸ್ಯರು**
ಶ್ರೀಮತಿ ಬೈತಡ್ಕ ಜಾನಕಿ ಬೆಳ್ಯಪ್ಪ
ಶ್ರೀಮತಿ ಸ್ಮಿತಾ ಅಮೃತರಾಜ್
ಶ್ರೀಮತಿ ಚೊಕ್ಕಾಡಿ ಪ್ರೇಮ ರಾಘವಯ್ಯ
ಶ್ರೀ ಧನಂಜಯ ಅಗೋಳಿಕಜೆ
ಶ್ರೀ ದಂಬೆಕೋಡಿ ಎಸ್. ಆನಂದ
ಡಾ. ಕೂಡಕಂಡಿ ದಯಾನಂದ
ಶ್ರೀ ಕುಸುಮಾಧರ ಎ.ಟಿ.
ಡಾ. ವಿಶ್ವನಾಥ ಬದಿಕಾನ
ಶ್ರೀ ಜಯಪ್ರಕಾಶ್ ಮೋಂಟಡ್ಕ ಬಿಳಿನೆಲೆ
ಶ್ರೀ ಪುರುಷೋತ್ತಮ ಕಿರ್ಲಾಯ
ಡಾ. ಪುರುಷೋತ್ತಮ ಕೆ.ವಿ. ಕರಂಗಲ್ಲು
ಶ್ರೀ ಕಿರಣ್ ಕುಂಬಳಚೇರಿ
ಶ್ರೀ ಭರತೇಶ ಅಲಸಂಡೆಮಜಲು

ರಿಜಿಸ್ಟ್ರಾರ್
**ಶ್ರೀ ಚಿನ್ನಸ್ವಾಮಿ**

1. ವೇದ ಸುಳ್ಳಾದರೂ ಗಾದೆ ಸುಳ್ಳಾಕಿಲೆ.
2. ಅಕ್ಕನ ಮನೆಗೆ ಅಕ್ಕಿ ತಕಂಡ್ ಹೋಕಾ?
3. ಅಕ್ಕಿ ಕೊಟುಂಬಕೆ ಅಕ್ಕನ ಹಂಗ್ಯಾಕೆ?
4. ಅಟ್ಟ ಹತ್ತಿ ಒಲೆ ಹೊತ್ತಿತ್, ಕೆಟ್ಟಮ್ಯಾಲೆ ಬುದ್ಧಿ ಬಾತ್,
5. ಅತ್ತೆಗೆ ಅರಿವೆ ಚಿಂತೆ, ಸೊಸೆಗೆ ಮಿಂಡನ ಚಿಂತೆ.
6. ಅತ್ತೆಮ್ಯಾಲೆ ಸಿಟ್ಟ್, ಕೊತ್ತಿಗೆ ಪೆಟ್ಟ್.
7. ಅಜ್ಜಿಗೆ ಪಿಳ್ಳಿ ಕೆಮ್ಮಿಕೆ ಕಲ್ಸಿದಂಗೆ.
8. ಅವ್ವ ತೋಡ್ ದಾಟಿರೆ, ಮಗಳ್ ಹೊಳೆ ದಾಟಿದೆ.
9. ಅಜ್ಜಿ ಸಾಂಕಿದ ಪಿಳ್ಳೆ, ಬೊಜ್ಜದನ್ನ ಉಂಬಕೆ ಲಾಯಿಕಿಲ್ಲೆ.
10. ಅಡಿಕೆಲಿ ಹೋದ ಮಾನ, ಆನೆ ಕೊಟ್ರು ಬಾಕಿಲೆ.
11. ಅಣ್ಣ ನಮ್ಮಂವ ಆದರೆ, ಅತ್ತಿಗೆ ನಮ್ಮವಳು ಅಲ್ಲ.
12. ಅತ್ತೆ ಅಗಸನ ಹತ್ರ ಹೋದು, ಸೊಸೆಗೆ ಬುದ್ಧಿ ಹೇಳ್ದು.
13. ಅತ್ತೆ ಒಡಿಯದು ಹಳೇ ಮಡಿಕೆ, ಸೊಸೆ ಒಡೆದು ಹೊಸ ಮಡಿಕೆ.
14. ಅತ್ತೆ ಇಲ್ಲದ ಮನೆಲಿ ಸೊಸೆ ಬಿಕಾರಿ.
15. ಅತ್ತೆದ್ ಅಳಿಯದಾನ.
16. ಅಪ್ಪನ ಅರಮನೆಗಿಂತ, ಗಂಡನ ಗುಡ್ಸಲೇ ಲೇಸ್.
17. ಅಪ್ಪನ ಕಾಲಂದ ಕಂಡತ್‌ಲೆ, ಉಪ್ಪು ಹಾಕಿದ ಗಂಜಿ.
18. ಅಪ್ಪ ಚಟ್ಟಕ್ಕೆ ಹೋಕನ, ಅವ್ವ ಪಟ್ಟಕ್ಕೆ ಬಾತ್.
19. ಅಲ್ಪಂಗೆ ಐಶ್ವರ್ಯ ಬಾಕನ, ಮಧ್ಯ ರಾತ್ರೆಲಿ ಕೊಡೆ ಹಿಡ್ದೆ.
20. ಅಳಿಯ ಅಲ್ಲ, ಮಗಳ ಗಂಡ ತೇಳ್ದಂಗೆ.
21. ಅಪ್ಪ ಅವ್ವನ ಜಗಳಲಿ, ಕೂಸು ಬಡ್‌ಕಲ್ ಆತ್.
22. ಅತೀ ಆಸೆ ಗತಿಕೇಡ್.
23. ಅಕ್ಕ ಅವಸರಕಿಲ್ಲೆ, ತಂಗೆ ಸಮಯಕಿಲ್ಲೆ, ನನ್ನವೇ ನಂಗಿಲ್ಲೆ
ಮತ್ತೆ ಬೆರೆವು ಆದು ಅದೆಂಗೆ.

24. ಅಕ್ಕನ ಮಕ್ಕ ಪಲ್ಲಕಿ ಏರ್‌ಕನ, ಮತ್ತಷ್ಟ್ ಹೆಚ್ಚಾತ್ ಆಳ್ ಕೆಲ್ಸ.
25. ಅಕ್ಕಿ ಹಾಕದೆ ಅನ್ನ ಆಕಿಲೆ, ಮಾತ್‌ಲೆ ಹೋಟ್ಟೆ ತುಂಬಿಕಿಲೆ.
26. ಅಕ್ಕಿ ಆದುಣ್ಣಕು, ಅನ್ನ ಚೆಲ್ಲಿ ಉಣ್ಣಕು.
27. ಅಗಸನ ಕತ್ತೆನ, ಅರಸಂಗೆ ಕಾಣಿಕೆ ಕೊಟ್ಟಂಗೆ.
28. ಅಗ್ಗದ ಆಸೆಗೆ ಗೊಬ್ಬರ ತಕಂಡಂಗೆ.
29. ಅಚ್ಚ್‌ಕಟ್ಟಾಗಿ ಇರುವವಳ್, ಮನೆಲಿ ಉಚ್ಚೆ ಹೊಯ್ಕಂಡಂಗೆ.
30. ಅಟ್ಟ ಎಟ್‌ಕದಷ್ಟು ಬಡ್ಡಿಗೆ ತಂದ್,
ಆ ಕಡೆನೂ ಕೋಟೆ ಈ ಕಡೆನೂ ಕೋಟೆ.
31. ಅಡಿಗೆ ಆದ ಮೇಲೆ ಗಡಿಗೆ ಯಾಕೆ?
32. ಅಡಿಗೆ ಮಾಡಿಕೆ ಆಗದವುಳಿಗೆ ಸೌದೆ ಡೊಂಕು,
ಕುಟ್ಟಿಕೆ ಆಗದವುಳಿಗೆ ಒನಿಕೆ ಡೊಂಕು.
33. ಅತ್ತ್ ಕರ್ದ್ ಔತಣಕ್ಕೆ ಹೊದಂಗೆ
34. ಅತ್ತೆ ಅಗಸನ ಹತ್ರ ಹೋದು, ಸೊಸೆಗೆ ಬುದ್ಧಿ ಹೇಳ್ದು.
35. ಅತ್ತೆ ಇಲ್ಲದ ಮನೆಲಿ ಸೊಸೆ ಬಿಕಾರಿನೆ.
36. ಅತ್ತೆಗೆ ಅಳಿಯ ದೇವುರು, ಮಾವಂಗೆ ಸೊಸೆನೆ ಎಲ್ಲಾ.
37. ಅನ್ನ ತಿಂದವ ಗುಂಡ್ ಕಲ್ಲ್, ಹಿಟ್ಟ್ ತಿಂದವ ಹಿಟ್ಟ್ ಕಲ್ಲ್.
38. ಅನ್ನ ಇಲ್ಲದಂವ ಎಂಜ್‌ಲಿಗೆ ಹೇಸಿಕಿಲ್ಲೆ,
ಬಟ್ಟೆ ಇಲ್ಲದಂವ ಮೈಲಿಗೆ ಹೇಸಿಕಿಲ್ಲೆ.
39. ಅನ್ನ ಹೆಚ್ಚಿಗಿದ್ದರೆ ಅಹಂಕಾರ ಹೆಚ್ಚ್, ನೀರ್ ಹೆಚ್ಚಿದ್ದರೆ ನೇಮ ಹೆಚ್ಚ್.
40. ಅನ್ಯಾಯದ ಗಳಿಕೆ ಕಾಡ್‌ಪಾಲ್.
41. ಅನಿಷ್ಟಕ್ಕೆಲ್ಲಾ ಶನಿದೇವುರುನೇ ಮೂಲ ತೇಳ್ದಂಗೆ.
42. ಅನುರಾಧ ಮಳೆ ಬಾತ್, ತಿಂಬೋ ರಾಗಿನ ಕೊಚ್ಚಿಕಂಡ್ ಹೋತ್.
43. ಅಪರಾಧಿಗೆ ಕಷ್ಟ, ಪಿರ್ಯಾದಿಗೆ ನಷ್ಟ, ಲಾಯರಿಗೆ ಅದೃಷ್ಟ,
ಕೋರ್ಟಿಗೆ ಹೋದಂವ ಭ್ರಷ್ಟ.

44. ಅಪ್ಪನ ಅರಮನೆಗಿಂತ, ಗಂಡನ ಕಿರಿಮನೆನೆ ಲೇಸ್.
45. ಅಪ್ಪನ ಕಾಲಂದ ಕಂಡತ್‌ಲೆ, ತುಪ್ಪ ಹಾಕಿದ ಗಂಜಿ.
46. ಅಪ್ಪನ ಕಾಲಲಿ ಅರಮನೆ, ಮಕ್ಕಳ ಕಾಲಲಿ ಬರಮನೆ.
47. ಅಪ್ಪನ ಮನೆ ತಂಪುಗಿಂತ, ತಿಪ್ಪೆ ಮರದ ತಂಪು ಲೇಸ್.
48. ಅಪ್ಪನ ಮನೆಲೀ ಛೀ ತೇಳ್ಸಿಕಂಡವುಳು,
ಮಾವನ ಮನೆಲಿ ಸೈ ತೇಳ್ಸಿಕಂಡದ್ಯಾ.
49. ಅಪ್ಪನಂಥ ನೆಂಟ ಇಲ್ಲೆ, ಸೊಪ್ಪುನಂಥ ಊಟ ಇಲ್ಲೆ.
50. ಅವಸರಕ್ಕೆ ಅಜ್ಜಿ ಮೈ ನೆರ್ದಂಗೆ.
51. ಅವುಳು ಬ್ಯಾಡತ ಇವುಳ ತಂದರೆ, ನಿಗರಿ ನಿಗ್‌ರಿಕಂಡೆ ಉಚ್ಚೆ ಹೊಯ್ದೆ.
52. ಅತ್ತ್‌ಕಂಡ್ ಹೋದಂವ ಆಡ್ ಕಾದದ್ಯಾ.
53. ಅಳಿಯನ ಅರಮನೆಗಿಂತ, ಮಂಜನ ಕಿರಿ ಮನೆನೆ ಸುಃಖ.
54. ಅಂವ ಹಿಡ್ಡ ಮೊಲಕೆ ಮೂರೇಕಾಲ್.
55. ಅಂಗೈ ಹುಣ್ಣಿಗೆ ಕನ್ನಡಿ ಯಾಕೆ?
56. ಅಂತ್ ಇಂತ್ ಕುಂತಿ ಮಕ್ಕ ವನವಾಸ
57. ಅರುವತ್ತ್ ಆದ ಮೇಲೆ ಅರಳೋ ಮರುಳೋ.
58. ಅವ್ವಂಗೆ ಅರಿವೆ ಚಿಂತೆ, ಮಗಳಿಗೆ ಮಿಂಡನ ಚಿಂತೆ.
59. ಅವ್ವಂಗೆ ಹೊಟ್ಟೆಕಡೆಗ್ಯಾನ, ಹೆಣ್ಣಿಗೆ ಮೊಟ್ಟೆಕಡೆಗ್ಯಾನ.
60. ಅಂಗೈಲಿ ಬೆಣ್ಣೆ ಹಿಡ್ಕಂಡ್, ಊರೆಲ್ಲಾ ಸುತ್ತಿದಂಗೆ.
61. ಅದೃಷ್ಟವಂತ ಮಸಿ ಹಿಡ್ಡರೆ ಚಿನ್ನ, ದರಿದ್ರ ಚಿನ್ನ ಹಿಡ್ದರೆ ಮಸಿ.
62. ಅಪ್ಪ ನೆಟ್ಟ ಆಲದ ಮರತಾ, ನೇಣ್ ಹಾಕಿಕಂಬಕಾದೆನ?
63. ಅಪ್ಪ ಆಲದ ಮರಕೆ ಸುತ್ತ್ ಬಾತ್‌ತಾ ಮಂಜನೂ ಸುತ್ತಿತ್.
64. ಅಗಸಂದ್ ಕೈ ಸುದ್ದ, ಕತ್ತೆದ್ ಬೆನ್ನ್ ಸುದ್ದ.
65. ಅಕ್ಕನ ಮನೆನೂ ಮುಗ್ಗಿದ ಅಕ್ಕಿನೂ ಒಂದೇ.
66. ಅಗಸನ ಅಂಗೈಲಿ ಉಂಬಕ್, ಕೆಲ್ಸದವನ ಅಂಗಳಲಿ ಉಂಬಕಾಕಿಲೆ.

67. ಅಗಸನ ಹತ್ರ ಬೊಗಸೆ ನೀರಿಗೆ ಬರನಾ.

68. ಅಗ್ದರೆ ಸವೆಕಿಲೆ, ನುಂಗಿರೆ ಇಳೆಕಿಲೆ.

69. ಅಜ್ಜಿಗೈದದೆಲ್ಲಾ ಅಜ್ಜನ ಉಡೆದಾರಕ್ಕೆ ಸರಿ.

70. ಅಟ್ಟ ಹತ್ತವುಕೆ ಏಣಿಕೊಡಕ್, ಬೆಟ್ಟ ಹತ್ತವುಕೆ ಕೊಡಿಕಾದೆನಾ?

71. ಅಡಿಗೆ ಮಾಡಿಕಾಗದವುಗಳಿಗೆ ಸೌದೆಡೊಂಕು.

72. ಅಡಿಗೆ ಆದಮ್ಯಾಲೆ ಅಗ್ರಣ್ಣೆ.

73. ಅಡಿಗೆ ಗೊತ್ತುಟ್ಟುತ್ತಾ ಕರ್ದರೆ
ಒಂದು ಕುಂಬಳಕಾಯಿಗೆ ಒಂಬತ್ತು ಚೊಂಬು ನೀರ್ ಹಾಕಿತ್.

74. ಅಡಿಗೆ ಮಾಡೋಳ ಕೈ ಗುಣನೊ, ಕುಂಬಾರನ ಮಡಿಕೆ ಗುಣನೋ.

75. ಅಡಿಗೆ ಯಾಕೆ ಹಿಂಗೆ ಮಾಡ್ದ ತೇಳಿರೆ, ಬೆಂಕಿ ಸರಿ ಹೊತ್ತಿತ್‌ಲೆ ತೇಳ್ತ್.

76. ಅಣ್ಣ ಅಪ್ಪ ಅಕಿಲೆ, ಅತ್ತಿಗೆ ಅವ್ವ ಆಕಿಲೆ.

77. ಅತ್ತೆ ಇಲ್ಲದವುಳು ಬಿಕಾರಿ,  ಮಾವ ಇಲ್ಲದವುಳು ವೈಯಾರಿ,
ಗಂಡ ಇಲ್ಲದವುಳು ಬಜಾರಿ.

78. ಅತ್ತೆ ದೇಶಾಂತ್ರ, ಸೊಸೆ ಸ್ವಾತಂತ್ರ.

79. ಅತ್ತೆ ಮನೆಲಿ ಹೆಂಗೊಳ ಮಗಳೆ ಕೇಳಿರೆ, ಮುಳ್ಳ್ ದಾರಿಲಿ ನಡ್ದಂಗೆ.

80. ಅತ್ತೆ ಮಾವನ ಎತ್ತಿಕಟ್ಟಿತ್, ಅಪ್ಪ ಅವ್ವನ ಮೆಟ್ಟಿ ನಿತ್ತ್‌ತ್.

81. ಅನ್ನ ಇಕ್ಕಿ ಸಾಕ್ ತೇಳಕ್, ದುಡ್ಡ್‌ಕೊಟ್ ಸಾಕ್ ತೇಳಿಕಾಕಿಲೆ.

82. ಅನ್ನ ಹಾಕಿದ ಮನೆನೂ, ಗೊಬ್ಬರ ಹಾಕಿದ ಗದ್ದೆನೂ ಹಾಳಾಕಿಲೆ.

83. ಅನ್ಯಾಯದ ಸಂಪಾದನೆ ಕಾಡ್‌ಪಾಲ್.

84. ಅಪ್ಪ ತೆಗ್ದ ಬಾವಿತ, ಉಪ್ಪು ನೀರ್ ಕುಡಿಯಕಾದ್ಯಾ?

85. ಅಪ್ಪ ಮಾಡ್ದ ಸಾಲಕ್ಕೆ, ಮಂಜನ ತಿಪ್ಪೆ ಮೇಲೆ ಎಳ್ದಂಗೆ.

86. ಅರಮನೆವು ಸುಮ್ಮನಿದ್ದರೂ, ನೆರೆ ಮನೆವು ಸುಮ್ಮನಿರಿಕಿಲೆ.

87. ಅಯ್ಯೋ ತೇಳ್ದವಂಗೆ ಅರ್‌ತಿಂಗ ಆಯಸ್ಸು ಕಡಿಮೆ.

88. ಅರ್ಸಂಗೆ ಅರ್ಧರಾಜ್ಯ, ತಿರ್‌ಕಂಗೆ ಇಡಿರಾಜ್ಯ.

89. ಅಳಿಯಂಗೆ ಮಾಡ್ದೂ ಒಂದೇ, ಆಳ್ಗಳಿಗೆ ಮಾಡ್ದೂ ಒಂದೇ.

90. ಅಸಮಾನ್ಯಂಗೆ ಆರಂಭ ಬೇಕಿಲ್ಲೆ, ದಾಸಂಗ್ಯಾಕೆ ದನ ಕರ್‌ಗ.

91. ಅಂತಪ್ಪನ ಮನೆಗೆ ಇಂತಪ್ಪ ಬಾತ್.

92. ಅಂಬು ಅಟ್ಟಲಿ ಬಿಲ್ಲ್ ಬಾಣಲಿ.

93. ಅವ್ವಂಗೆ ಜ್ವರ ಅಪ್ಪಂಗೆ ಕುರ.

94. ಅಂದಿಗೆ ಅದೇ ಸುಖ, ಇಂದಿಗೆ ಇದೇ ಸುಖ

95. ಅಂವ ಹಿಡ್ದ ಮೊಲಕೆ ಮೂರೇ ಕಾಲ್.

96. ಅಂಗೈ ಹುಣ್ಣಿಗೆ ಕನ್ನಡಿ ಯಾಕೆ.

97. ಅಂತು ಇಂತು ಕುಂತಿ ಮಕ್ಕ ವನವಾಸ.

98. ಅರುವತ್ತ್ ಅದ್ ಮೇಲೆ, ಅರಳೋ ಮರುಳೋ.

99. ಅಂತಪ್ಪನ ಮನೆಗೆ, ಇಂತಪ್ಪ ಬಾತ್.

100. ಅಂಬುಲಿಗೆ ಉಪ್ಪಿಲ್ಲೆ, ಜಂಭರಕ್ಕೆ ಉಪ್ಪರಿಗೆ.

101. ಅಂಕೆಲಿರುವ ಹೆಣ್ಣ್, ಮಜ್ಜಿಗೆಲಿರುವ ಬೆಣ್ಣೆ ಕೆಡ್ದುಲೆ.

102. ಅಂದ ನೋಡ್ರೆ ತಿಂಬೋನತ ಆದೆ,
ಗುಣ ನೋಡ್ರೆ ಗುದ್ದಿ ಕಂಬೋನತ ಆದೆ.

103. ಅಂಬುಲಿ ಕುಡ್ಡಂವ ಮಡ್ಡಿಕೆ ಹೊತ್ತದ್ಯಾ,

104. ಅಂಬುಲಿ ತರದ ಊಟ ಬ್ಯಾರೆ ಇಲ್ಲೆ,
ಕಂಬುಳಿ ತರದ ಹೊದಿಕೆ ಇನ್ನೊಂದು ಇಲ್ಲೆ.

105. ಆಕಾಶ ನೋಡಿಕೆ ನೂಕಾಟ ಯಾಕೆ?

106. ಆಚಾರ ಹೇಳಿಕೆ ಕರ್ಸಿದಂವ, ಹೆಣ್ಣ್ ಬುಟ್ಟ್ ಆರ್‌ತಿಂಗ ಆತ್.

107. ಅಚಾರಿ ಮಾತ್ ಆಚೆಗೆ ಒಂದು, ಈಚೆಗೆ ಒಂದು.

108. ಆಚೆ ಮನೆ ಅಕ್ಕ ನೆನ್ನಕ್ಕಿಲಿ ಉಂಡತ್,
ಈಚಮನೆ ಅಕ್ಕ ನೇಣಾಕಂಡ್ ಸತ್ತತ್.

109. ಆಟ ಆಡುವ ಗೂಡೆಗೆ, ಕಾಟ ಕೊಡುವ ಕೂಸು.

110. ಆಚೆ ಮನೆವುಳು ಎಳ್ಳ್ ಹೊರ್ಕಂಡ್ ತಿಂದರೆ
ಈಚಮನೆ ಅಕ್ಕ ನೇಣಾಕಂಡ್ ಸತ್ತ್‌ತ್.

111. ಆತುರ ಮಾಡಿ ಗೋತ್ರ ಕೆಡ್ಸಿಕಂಡ್ತ್.

112. ಆನೆಗಿರುವಷ್ಟೇ ಆನೆಗೆ, ಪಿಜಿನಿಗುರುವಷ್ಟೇ ಪಿಜಿನಿಗೆ.

113. ಆನೆ ಹೋದೆ, ನಾಯಿ ಬೊಗ್‌ಳ್ದೆ.

114. ಆನೆ ಹೋದ ಮೇಲೆ ಬಾಲಕ್ಕಾಗಿ ಹೊಡ್ದಾಟ.

115. ಆನೆ ಹಿಂದೆ ಇದ್ದರೂ, ಗಂಟೆ ಸದ್ದ್ ಮುಂದೆ.

116. ಆನೆ ಕದ್ದ ಮಾನ, ಅಡಿಕೆ ಕದ್ದ್ ಹೋದಂಗೆ.

117. ಆರಂಭದ ಬುಡ ಕಷ್ಟ, ಅಧಿಕಾರದ ತುದಿಕಷ್ಟ.

118. ಆಸೆಗಾರ ಅಪ್ಪಂಗೆ, ಮೋಸಗಾರ ಮಂಜ

119. ಆಳಾಗಿ ದುಡಿ, ಅರಸಾಗಿ ತಿನ್ನ್.

120. ಆಳ್ ಮಾಡ್ದ್ ಹಾಳ್, ಮಂಜ ಮಾಡ್ದ್ ಮಧ್ಯಮ,
ಅಪ್ಪ ಮಾಡ್ದ್ ಉತ್ತಮ.

121. ಆಳ್ ನೋಡ್ರೆ ಅಲಂಕಾರ, ಬಾಳ್ ನೋಡ್ರೆ ನಾಯಿ ಪಾಡ್.

122. ಆಳ್ ನೋಡಿ ಅನ್ನ ಹಾಕ್, ಪಾತ್ರ ನೋಡಿ ಭಿಕ್ಷೆ ಹಾಕ್.

123. ಆಳ್ ಸಣ್ಣಂವಾದರೂ, ಆಸ್ತಿ ದೊಡ್ಡದ್.

124. ಆಡ್ ಮುಟ್ಟದ ಸೋಪ್ಪಿಲ್ಲೆ.

125. ಆಕಾಶಕ್ಕೆ ಏಣಿ ಕಟ್ಟಿಕೆ ಹೋತ್.

126. ಆಗ ಭೋಗ ಇಸಿಕಂಡವುಳ್ದ್,
ಬಳಿಯೋದು ಬಾಚೂದು ಕಟ್ಟಿಕಂಡವುಳ್ದ್.

127. ಆಗುವವರೆಗೆ ಇದ್ದ್, ಆರ್‌ಕನ ಮುಟ್ಟ ನಿಲ್ಲಿಕಿಲ್ಲೆ.

128. ಆಚಾರ ಹೇಳುವವನ ಮನೆಲಿ, ಆರ್ ಜನ ಗಂಡ ಬುಟ್ಟು ಬಂದವು.

129. ಆಡ್ದೆ ಆಟ ಆತ್.

130. ಆಡ್‌ವವರ ಜ್ವತೆ ಸೇರಿ ಆಡಿ ಕಂಡೇ ಬಾಡ್ ತಿಂಬಕೆ ಕಲ್ತತ್.

131. ಆಡಿ ಉಂಬಕೆ ಅಪ್ಪನ ಮನೆ ಅಲ್ಲ,
ಮಾಡಿ ಉಂಬಕೆ ಮಾವನ ಮನೆ ಅಲ್ಲ,
ಕುದ್ದ್ ಉಂಬಕೆ ಅದೇನ್ ಕಂಡವರ ಮನೆ ಅಲ್ಲ.

132. ಆತುರ ಮಾಡಿ ಗೋತ್ರ ಕೆಡ್ಸಿದಂಗೆ.

133. ಆನೆ ನುಂಗುವವಂಗೆ ಅಳ್ ಏನ್ ಲೆಕ್ಕ.

134. ಆನೆನೂ ಮುಂಗರಿಸಿದೆ.

135. ಆನೆ ಹೋದ ಮ್ಯಾಲೆ ಬಾಲಕ್ಕೆ ಬಡ್ದಾಟ.

136. ಆರ್ ಕಾಲ ಮಳೆ ಬಂದ್, ಮುತ್ತುಗಕ್ಕೆ ಮೂರೆ ಎಲೆ.

137. ಆರ್ಸ್‌ವವನೂ ಅಲ್ಲ, ತೀರ್ಸ್‌ವವನೂ ಅಲ್ಲ.

138. ಆರ್ ಕೆರೆ ನೀರ್ ಕುಡ್ದವಂಗೆ ಇದೇನ್ ಮಹಾ.

139. ಆರ್ ಊರು ತಿರುಗಿರೂ ಜೋಳಿಗೆ ತುಂಬಿತಲೆ,
ಹಾಳ್ ಜೋಗಿ ಜೊತೆ ನಾನ್ಯಾಕೆ ಬಂದೆ.

140. ಆಳ ಎಷ್ಟ್ ತೇಳಿರೆ ಎಸಂಡ್‌ದ್ ಎದೆ ಉದ್ದ,
ಕೊತ್ತಿದ್ ಮೊಣಕಾಲ್ ಉದ್ದ.

141. ಆಳಿಕೆ ಅರಸ, ಅನ್ನ ಇದ್ದರೆ ರಭಸ.

142. ಆಳ್‌ನ ಮುದ್ದೆ ನಾಯಿ ಪಾಲಾತ್, ಅಜ್ಜನ ಹೆಣ್ಣ್ ಹೈದನ ಪಾಲಾತ್.

143. ಆಳ್ ಮ್ಯಾಲೆ ಆಳ್ ಬಿದ್ದ್, ಹೊಟ್ಟೆ ಖಾಲಿ ಆತ್.

144. ಇಸಿಕಂಡವ್ರುಳು ಇರುವವರೆಗೆ, ಕಟ್ಟಿಕಂಡವ್ರುಳು ಸಾಯುವವರೆಗೆ.

145. ಇದ್ದದ್ದ್ ಇದ್ದಂಗೆ ಹೇಳಿರೆ, ಎದ್ದ್ ಬಂದ್ ಎದೆಗೆ ಹಾರಿ ಒದ್ದಂಗೆ.

146. ಇದ್ದರೆ ಹುಲಿ ತಿನಿ, ಇಲ್ಲದಿದ್ದರೆ ಇಲಿ ತಿನಿ.

147. ಇರ್‌ಕನ ಹಬ್ಬ, ಇಲ್ಲದಿರ್‌ಕನ ಒಪ್ಪತ್ತು.

148. ಇಲಿ ಹೋತ್ ತೇಕನ, ಹುಲಿ ಹೋತ್ ತೇಳುವೆ.

149. ಇಂದ್ ಅವಂಗೆ ನಾಳೆ ನಂಗೆ.

150. ಇಂಗ್ ತಿಂದ ಮಂಗನಂಗೆ ಆಡ್ಬಡ.

151. ಇಕ್ಕಿಕಾಗದ ಕೈ ಎಂಜಿಲ್ ತೇಳ್ದಂಗೆ.

152. ಇಕ್ಕದೆ ಬುಡಿಕಿಲೆ, ಕೊಡದೆ ಹೋಕಿಲೆ.

153. ಇಕ್ಕವು ಇರ್‌ಕನ, ಉಂಬವುಕೇನ್ ಬರ.

154. ಇತ್ತ ಬಾ ತೇಕನ, ಇರುವ ಮನೆನೂ ಕಿತ್ತೂಕಂಡೋ.

155. ಇದ್ದದ್ ಇದ್ದಂಗೆ ಹೇಳಿರೆ, ಕೆಂಡದಂತ ಕೋಪ.

156. ಇದ್ದರೆ ಈ ಊರು, ಹೋದರೆ ಪರ ಊರು.

157. ಇದ್ದ ಊರಿಗೆ ಹೆಣ್ಣ್ ಕೊಡಿಕಾಗದ್, ಇದ್ದ ಊರುಂದ ಹೆಣ್ಣ್ ತಾಕಾಗದ್.

158. ಇಬ್ಬರ ಜಗಳ, ಇನ್ನೊಬ್ಬಂಗೆ ಲಾಭ.

159. ಇಲಿ ಒಳಗೆ ಬುಟ್ಟ್, ಮಾಳಿ ಮುಚ್ಚಿದಂಗೆ.

160. ಇಂದ್‌ನ ಬುದ್ಧಿ ಅಂದ್ ಇರಕಾಯ್ತ್.

161. ಇಕ್ಕಟ್‌ನ ಜಾಗಕ್ಕೆ, ಇದ್ದ ನೆಂಟ್ರೆಲ್ಲಾ ಬಂದವೆ.

162. ಇಕ್ಕವು ಇರ್‌ಕನ, ಕೊಟ್ಟಿಗೆ ಅದರ್‍ನೂ ಸೈ.

163. ಇಸಿಕಂಡವುಳು ಇರುವವರೆಗೆ, ಕಟ್ಟಿಕಂಡವುಳು ಕಡೆವರೆಗೆ.

164. ಇರ್‌ಕನ ಹಬ್ಬ, ಇಲ್ಲದಿರ್‌ಕನ ಉಪವಾಸ.

165. ಇದ್ದ ಊರುಲೇ ಇರ್ದುಲೆ, ಬಿದ್ದ ಗೋಡೆನ ಕಟ್ಟಿತ್‌ಲೆ.

166. ಇರುವ ಒಬ್ಬಳು ಮಗ್‌ಳ್, ಹಾಳಾಗಿ ಹೋದಂಗೆ.

167. ಇಷ್ಟ್ ಸಣ್ಣ ಹೊಟ್ಟೆವಂಗೆ, ಅಷ್ಟ್ ದೊಡ್ಡ ಮನೆ.

168. ಇಂಗ್ ತೆಂಗ್ ಇದ್ದರೆ ಕಪಿನೂ ಅಡಿಗೆ ಮಾಡ್ದೆ.

169. ಈಚ್‌ಲ್ ಮರಕೆ, ಆಚಾರ ಗೊತ್ತುಟ್ಟಾ.

170. ಈಚ್‌ಲ್ ಮರದ ಕೆಳಿಗೆ, ಮಜ್ಜಿಗೆ ಕುಡ್ದಂಗೆ.

171. ಈ ಊರುಲಿ ಹುಲಿ, ಪರ ಊರುಲಿ ಇಲಿ.

172. ಈದ ಹುಲಿನೂ, ನಾಯಿನೂ ಕೆಣ್‌ಕಿಕೆ ಆಗದ್.

173. ಈರೆ ಕಾಯಿ ಹಾಕಿರೆ, ಸೋರೆ ಕಾಯಿ ಬುಟ್ಟದೆನಾ.

174. ಉಗುರು ನುಂಗಿರೆ ಉಂಡಂಗಾದುಲೆ, ಹೊಂಸು ಬುಟ್ಟರೆ ಹೇತಂಗಾದುಲೆ.

175. ಉಚ್ಚೆ ಕುಡ್ದರೂ, ತನ್ನ ಇಚ್ಚೆಲೇ ಇರಕೂ.
176. ಉಂಡ ಮನೆಗೆ, ಎರಡ್ ಬಗೆಕಾಗದ್.
177. ಉಪ್ಪು ತಿಂದಂವ, ನೀರ್ ಕುಡಿಯೋಕು.
178. ಉಪ್ಪುಂಡ ಮನೆಗೆ, ಕೇಡ್ ಬಗಿಬ್ಯಾಡ.
179. ಉತ್ತರಕುಮಾರನ ಪೌರುಷ ಒಲೆ ಮುಂದೆ.
180. ಉಪುಂಡ ಮನೆನ ಮರಿಬಡ.
181. ಉಂಡ್ ತಿಂದ್ ಗೆಂಡೆರೋಗ.
182. ಉಚ್ಚೆ ಬಂದರೆ ಕಚ್ಚೆ ತಡ್ದದೆನಾ?
183. ಉಗುಳು ನುಂಗಿರೆ, ಉಂಡಂಗೆ ಅದುಲೆ.
184. ಉಪ್ಪರಿಗೆಲಿ ವಾಸ ಮಾಡ್ದರೂ, ಉಪ್ಪು ಇಲ್ಲದೆ ಊಟ ಆಕಿಲೆ.
185. ಉಪ್ಪರಿಗೆಲಿ ಕುದ್ದ್, ಮುಚ್ಚುಳಕ್ಕೆ ಉಚ್ಚೆ ಹೊಯ್ದಂಗೆ.
186. ಉಪ್ಪು ನೀರಿಗಿಂತ, ಕಪ್ಪು ನೀರೆ ಲೇಸ್.
187. ಉರಿ ಬಿದ್ದ ಮನೆಲಿ, ಉಳ್ದದ್ದೆ ಹೆಚ್ಚಿಗೆ.
188. ಉರ್ದವನ ಮುಂದೆ, ತಿಳ್ದಂವ ಬಂದಂಗೆ.
189. ಉಳಿ ಸಣ್ಣದಾದರೇನ್, ಬೆಟ್ಟನೆ ಕೊರ್ದದೆ.
190. ಉಂಡವುಳ ಕುಂಡೆ ನೋಡು, ಮಿಂದವುಳ ಮಂಡೆ ನೋಡು.
191. ಉಂಡಂವಗೆ ಉಂಡದೇ ಬಾತ್, ಗುಂಡು ಕಲ್ಲಿಗೆ ಸವುದದ್ದೇ ಆತ್.
192. ಉಂಡ್‌ಕಂಡ್ ಉಟ್ಟುಕಂಡ್ ಮನೆಲಿರ್ ತೇಳಿರೆ,
ಕಂಡವರ ಜೊತೆ ಆಡಿ ಕಾಡಿ ಬೆಣ್ಣೆ ತಾತ್.
193. ಉಪ್ಪರಿಗೆಲಿ ಇದ್ದರೂ, ಉಪ್ಪು ಇಲ್ಲದೆ ಅದುಲೆ.
194. ಉಪ್ಪು ಹಾಕಿದವರ್ನ, ಮುಪ್ಪುವರೆಗೂ ಮರಿಬಡ.
195. ಉಂಡಂವಂಗೆ ಉಬ್ಬಸ, ಹಸ್ಸದವಂಗೆ ಸಂಕಟ.
196. ಊಟ ಆತ್‌ತಾ ಕೇಳ್‌ಕನ, ಮುಂಡಾಸ್ ಮೂವತ್ತ್ ಮೊಳ ತೇಳ್ದೆ.
197. ಊರಿಗೆ ಉಪಕಾರಿ,  ಮನೆಗೆ ಮಾರಿ.

198. ಊರಿಗೆ ಆಳಲ್ಲ ಮಸಣಕ್ಕೆ ಹೆಣ ಅಲ್ಲ.

199. ಊರು ಮೇಲೆ ಊರು ಬಿದ್ದರೆ, ಶ್ಯಾನ್ ಬೋಗಂಗೇನ್.

200. ಊರು ಹೋಗು ತೇಳ್ದೆ, ಕಾಡ್ ಬಾ ತೇಳ್ದೆ.

201. ಊಟಕ್ಕಿಲ್ಲದ ಉಪ್ಪಿನಕಾಯಿ ಇನ್ನೆಂತಕಿರ್ದುರ್.

202. ಊಟಕ್ಕೆ ಮುಂದೆ ಇರಕೂ, ಜಗಳಕ್ಕೆ ಹಿಂದೆ ಇರೋಕು.

203. ಊರು ಬುಟ್ಟವಂಗೆ, ನೀರ್ನ ಹಂಗ್ಯಾಕೆ.

204. ಊರಿಗೆಲ್ಲಾ ಬುದ್ಧಿ ಹೇಳ್ದೆ, ಒಲೆಮುಂದೆ ಉಚ್ಚೆ ಹೊಯ್ದೆ.

205. ಊರುನ ಬಡತನ ರಾಜಂಗೆ ಗೊತ್ತು,
ಊರುನ ಸಿರಿತನ ಅಕ್ಕಸಾಲಿಂಗಂಗೆ ಗೊತ್ತು.

206. ಊರು ಕೊಳ್ಳೆ ಹೊಡ್ದ ಮೇಲೆ, ಕೋಟೆ ಬಾಗಲ್ ಹಾಕಿತ್.

207. ಊರಿಗೆಲ್ಲಾ ಗೊತ್ತಿರ್ದನ್ನ, ಕಿವಿಲೆ ಹೇಳ್ದಂಗೆ.

208. ಊರೆಲ್ಲಾ ನಗಾಡ್ದ ಮೇಲೆ, ನಮ್ಮ ಮನೆ ಪೊಟ್ಟ ನಗಾಡ್ತ್.

209. ಊರಿಗೆ ಊರುದು ಚಿಂತೆ, ಬಜಾರಿಗೆ ಮದುವೆ ಚಿಂತೆ.

210. ಊರು ನಾಯಿಗೆ ಹಿಟ್ಟ್ ಇಲ್ಲೆ, ನರ ಮನ್ಸಂಗೆ ಕಟ್ಟ್ ಇಲ್ಲೆ.

211. ಊರುಗೆ ನೂರು ಹಂದಿ ಇದ್ದಂಗೆ, ಕೇರಿಗೊಬ್ಬ ದೂರಂವ.

212. ಊರವುಕೆಲ್ಲಾ ಒಂದೇ ದಾರಿ, ಆದರೆ ಕೇಡ್ಂಗಂಗೆ ಮೂರು ದಾರಿ.

213. ಊರಿಗೆ ಉಪಕಾರಿ ಇಲ್ಲದವನ, ಹೆಣಕ್ಕೆ ಶೃಂಗಾರ ಯಾಕೆ?

214. ಊರು ಬುಟ್ಟು ಹೋದವುಕೆ, ಬರದ ಚಿಂತೆ ಯಾಕೆ?

215. ಊರೂರು ತಿರ್ಗಿ, ಉಟ್ಟ ಬಟ್ಟೆ ಹರ್ಕಂಡಂಗೆ.

216. ಊರಿಗೆಲ್ಲಾ ಗೊತ್ತಿರ್ದನ್ನ, ಕಿವಿಲಿ ಹೇಳ್‌ತೇಳ್ದಂಗೆ.

217. ಎತ್ತಿ ಆಡ್ದವರ ಮನೆಲಿ, ಹುಕ್ಕಿ ನೀರ್ ಕುಡಿಯಕಾದಗ್.

218. ಎಣ್ಣೆಲಿ ತಿಕ ತೊಳ್ದಂಗೆ.

219. ಎತ್ತ್ ನೀರಿಗೆ ಇಳಿಯಕನ, ಎಮ್ಮೆ ಏರಿಗೆ ಎಳ್ದೆ.

220. ಎಲ್ಲವರ ಮನೆ ದೋಸೆ ತೂತ, ನಮ್ಮ ಮನೆ ಕಾವಲಿ ತೂತ.

221. ಎಷ್ಟೋ ಹೇಳ್ದರೂ ನಾಯಿ ಬಾಲ ಡೊಂಕೆ.
222. ಎದೆ ಗಟ್ಟಿ ಉಟ್ಟುತಾ, ಎದೆಗಾರಿಕೆ ತೋರ್ಸಿಕಾಗದ್.
223. ಎಡ್ಗಿದ ಕಾಲಿಗೇ ಎಡ್ಗುದು.
224. ಎದೆ ಮೇಲೆ ಎಳ್ದ್ ಹಾಕಂಡಂಗೆ.
225. ಎಸಂಡ್ ಇರುವ ಕಲ್ಲ ಬುಟ್ಟ್, ಹಾವು ಇರುವ ಕಲ್ಲ್ ಮಗ್ಚ್ಯತ್.
226. ಎಲ್ಲವೂ ಬುದ್ಧಿವಂರತ್, ಆದರೂ ಒಂದು ದಿನ ದಡ್ಡ ಆದವೆ.
227. ಎತ್ತಿಗೆ ಜ್ವರ ಎಮ್ಮೆಗೆ ಬರೆ.
228. ಎಕ್ಕಡನ ಹೊರಗೆ ಇಸೋಕು, ದುಷ್ಟನ ದೂರ ಇಸೋಕು.
229. ಎತ್ತ್ ಇಲ್ಲದವುಕೆ ಕೋಣನೇ ದೊಡ್ಡದ್.
230. ಎತ್ತಿಗೆ ಗೋತ್ತಟ್ಟು ಎಣ್ಣೆ ಜಳಕ, ಕತ್ತೆಗೇನ್ ಗೋತ್ತು ಕಸ್ತೂರಿ ಪರಿಮಳ.
231. ಎಮ್ಮೆ ಮೇಲೆ ಮಳೆ ಹೊಯ್ದಂಗೆ.
232. ಎಲ್ಲಾ ಬುಟ್ಟ್ ಮಂಜ ಭಂಗಿ ನಟ್ಟತ್.
233. ಏಳಿಕಾಗದವಂಗೆ ಎಳ್ ಜನ ಹೆಣ್ಣ್ಗ.
234. ಎಲ್ಲವೂ ಹೊಡ್ಕಂಡ್ ಸತ್ತರೆ, ನನ್ನಗಂಡ ಬಡ್ಕಂಡ್ ಸತ್ತತ್.
235. ಎಕ್ಕಡಲಿ ಹೊಡ್ದ್, ಎಮ್ಮೆ ಚೆಕ್ಕಳ ತೇಳಿರಿ ಅದ್ ಹೆಂಗೆ.
236. ಎಡ್ಗಿದ ಬೆರ್‌ಳ್ ಎಡಿಗಿದಂಗೆ.
237. ಎಣ್ಣೆ ಹಾಕಂಡ್ ಒದ್ದಾಡ್ದರೂ, ಪುಣ್ಯ ಇದ್ದಷ್ಟೇ ಅಂಟುದು.
238. ಎತ್ತ್ ಇದ್ದವಂಗೆ ಎದೆನೇ ಇಲ್ಲೆ.
239. ಎತ್ತ್ ಉಚ್ಚೆ ಹೊಯ್ದಂಗೆ.
240. ಎತ್ತ್ ಹಾರಿಕೆ ಮುಂದೆ ಹೊದಿಕೆ ಹಾರ್ದಂಗೆ.
241. ಎತ್ತ್ ಸತ್ತರೆ ಅಪ್ಪ ತಂದದೆ, ಹೊಡಿಗಾಡಿನ ಬೆಟ್ಟಕ್ಕೆ.
242. ಎದೆಗಾರಿಕೆ ಇರಂವ ಗೋಣಿಗೆಕ್ಕಿಲ್ಲೆ.
243. ಎದ್ದ್‌ರ್ ಮುಂಜ ತೇಳಿರೆ, ಗುದ್ದಿಕೆ ಬನ್ನೆ ತೇಳ್ದಂಗೆ.
244. ಎರಡ್ ಕಳ ಕಾದ್ ಗೌಡ ಕೆಟ್ಟತ್.

245. ಎಲ್ಲಾ ಕಳ್ಕಂಡ್, ಕೈ ಕಾಲ ಮುಖ ತೋಳ್ಕಂಡಂಗೆ.
246. ಎಲುಬು ಇಲ್ಲದ ನಾಲಿಗೆ, ಹೆಂಗೆ ಬೇಕಾರು ಮಗ್ದದೆ.
247. ಎಳೆನೀರ್ ಯಂಕಟಪ್ಪಂಗಾತ್, ಕಾಯಿ ಪೂಜಾರಪ್ಪಂಗಾತ್, ತೋಟ ಕಾಯುವ ಕೆಲ್ಸ ಕೆಲ್ಸದವಂಗಾತ.
248. ಎಳ್ಳ್ ಹೂವುನೂ ಒಂದೇ, ಎಳೆ ಮಕ್ಕನೂ ಒಂದೇ.
249. ಎಂತವಂಗೂ ಬೇಡ, ಹೆಂಡ ಕುಡಿಯುವವನ ಸಂಗ.
250. ಏಳಿಕಾಗದವಂಗೆ, ಏಳ್ ಜನ ಹೆಣ್ಣ್‌ಗ
251. ಏಳಿಕಾಗದ ಅತ್ತೆಗೆ, ಕುರಿಕಾಗದ ಸೊಸೆ
252. ಏರಿ ದಾಟಿ ಹೋದ ನೀರ್, ಮಸಣಕ್ಕೆ ಹೋದ ಹೆಣ. ಹಿಂದಕ್ಕೆ ಬಾಕಿಲೆ.
253. ಏನ್ ಇಲ್ಲೆ ತೇಳುವವರ ಮನೆಲಿ ಏನೆಲ್ಲಾ ಇದ್ದರೆ ಏನ್, ತಾನ್ ಬುಟ್ಟ ಮನೆಲಿ ಯಾರ್ ಇದ್ದರೇನು.
254. ಏಳಿಕಾಗದವಂಗೆ ಏಳ್ ಜನ ಹೆಣ್ಣ್‌ಗ, ಮತ್ತೊಂದು ಸೂಳೆ.
255. ಏಳ್ ಜನ್ಮದ ಪುಣ್ಯಾಂತ ಹಾಸಿಗೆಂದ ಎದ್ದೇ ಏಳ್ದುಲೆ.
256. ಐದ್ ಬೆರಳ್ ಒಂದೇ ಸಮ ಇರ್ದುಲೆ.
257. ಒಡ್ದ ಮುತ್ತು, ಕಳ್ದ ಹೊತ್ತು ಮತ್ತೆ ಬಾಕಿಲೆ.
258. ಒಪ್ಪೊತ್ತಿಗೆ ಹಿಟ್ಟಿಲ್ಲೆ ಜುಟ್ಟಿಗೆ ಮಲ್ಲಿಗೆ.
259. ಒಂದಿದ್ದರೆ ಒಂದಿಲ್ಲೆ.
260. ಒಂದೂಂದೆ ಕೂದಲ್ ಕಿತ್ತ್, ತಲೆ ಬೋಳ್ಸಿದಂಗೆ.
261. ಒಂದು ಕಣ್ಣಿಗೆ ಸುಣ್ಣ, ಇನ್ನೊಂದು ಕಣ್ಣಿಗೆ ಬೆಣ್ಣೆ.
262. ಒಗ್ಗಿರೆ ಕಾಡ್‌ಲೆ ವಾಸ ಮಾಡಕ್.
263. ಒಡ್ದ ಕನ್ನಡಿಲಿ ಮುಖ ನೋಡಿಕಾದೆನಾ.
264. ಒಡ್ದ ಹಾಲಿಗೆ ಹೆಪ್ಪು ಹಾಕಿಕಾದುಲೆ, ಒಡ್ದ ಮನ್ಸನ ಕೂಡ್ಸಿಕೆ ಅದುಲೆ
265. ಒಣ್‌ಗಿದ ಹುಲ್ಲುತ ಅಸಡ್ಡೆ ಬ್ಯಾಡ, ಬೆಂಕಿ ಬಿದ್ದರೆ ಊರೇ ಸುಟ್ಟದೆ.

266. ಒಣ್‌ಗಿಲ್ ರೊಟ್ಟಿಗೆ ಹೊಡ್ದಾಡ್ದಂಗೆ.

267. ಒಪ್ಪತ್ತ್‌ಗೆ ಇದ್ದರೆ ಒಲೆ ಕಿತ್ತ್ ಹಾಕುವೆ.

268. ಒಪ್ಪತ್ತಿಗೆ ಅನ್ನ ಇಲ್ಲೆ, ಸುಪ್ಪೊತ್ತಿಗೆ ಯಾಕೆ?

269. ಒಬ್ಬಂಗಿಂತ ಇಬ್ಬರು ಲೇಸ್, ಹಬ್ಬಕ್ಕಿಂತ ಮದುವೆನೆ ಲೇಸ್.

270. ಒಲೆ ಡೊಂಕಾದರೆ, ಬದನೆ ಕಾಯಿ ಬೇಯೋದುಲೆನಾ.

271. ಒಲೆಲ್ಲೊಂದು ಸೌದೆ ಕೊಳ್ಳಿ ಇರೋಕು,
ಮನೆಲೊಂದು ಮುದಿ ಜೀವ ಇರೋಕು.

272. ಒಳಗೆ ಇಲ್ಲೆನಾ ಮಗಳೇ ಹೋದ ದಿಕ್ಕ್?

273. ಒಳಗೆ ಅವ್ವನ ಕಾಟ, ಹೊರಗೆ ಗುಮ್ಮನ ಕಾಟ.

274. ಒಳಗೆ ಕೊತ್ತಿದ್ ಕಾಟ, ಹೊರಗೆ ನಾಯಿದ್ ಕಾಟ.

275. ಒಳಗಿದ್ದ ಕಿಚ್ಚ್ ತನ್ನನ್ನೇ ಸುಟ್ಟದೆ.

276. ಒಳ್ಳ ಹೆಣ್ಣ್ ಸಿಕ್ಕಿರೆ ಬಂಗಾರ ಯಾಕೆ?

277. ಒಳ್ಳದ್‌ತಾ ಶಾಸ್ತ್ರ ಹೇಳಿರೆ ಕಳ್ಳತನ ಮಡಿಕಾದ್ಯಾ.

278. ಒಳ್ಳೊವುತಾ ದಾನಕ್ಕೆ ಕೈ ಚಾಚಿರೆ, ಜೊಳ್ಳು ದಾನ ಮಾಡ್ದೋ.

279. ಒಳ್ಳವರ ಮಾನ ಹಳ್ಳಿಲಿ ಹೊತ್.

280. ಒಂಟಿ ಕಣ್ಣ್ ಅಲ್ಲ, ಒಬ್ಬ ಮಂಜ, ಮಂಜ ಅಲ್ಲ.

281. ಒಂದು ಆಯ್ಯೆ ಹತ್ತ್ ಮಕ್ಕಳ ಸಾಕಿದೆ,
ಹತ್ತ್ ಮಕ್ಕಳಿಗೆ ಒಂದು ಅಯ್ಯೆನ ಸಾಕಿಕೆ ಆಕಿಲೆ

282. ಒಳ್ಳಂವತ ಒಳೆಗೆ ಬುಟ್ರೆ ಒದಿಯಕೆ ಬಂದೆ.

283. ಓದುದು ಶಾಸ್ತ್ರ ಮಾಡ್ದು ಪುರಾಣ.

284. ಓದುದು ಶಾಸ್ತ್ರ ಹಾಕುದು ಗಾಣ.

285. ಓಡಿ ಹೋಗುವವಳು, ಹಾಲಿಗೆ ಹೆಪ್ಪು ಹಾಕಿದ್ಯಾ?

286. ಓಡ್ದ ದಾರಿಲಿ ಹುಲ್ಲು ಹುಟ್ಟಿಕಿಲ್ಲೆ.

287. ಓಡವಂಗೆ ಒಂದೇ ದಾರಿ, ಬೆನ್ನ್ ಹತ್ತಿದವಂಗೆ ಹತ್ತಾರ್ ದಾರಿ.

288. ಓಣಿ ಹತ್ರ ಗದ್ದೆ ಮಾಡ್‌ಬಡ.

289. ಓಡುವ ಕಾಲ್‌ನ ಹೆಣ್ಣ್ ತರ್‌ಬಡ.

290. ಕಣ್ಣ್ ಕಾಣದ ಹೊಟ್ಟೆಗೆ, ಮಣ್ಣೊ ಮಸಣನೋ.

291. ಕತ್ತೆ ಕಾಲಿಗೆ ಕಡ್ಗ ಯಾಕೆ?

292. ಕತ್ತೆಗೇನು ಗೊತ್ತು ಭತ್ತದ ಗುಣ.

293. ಕತ್ತೆ ಮರಿಲಿ ಲಾಯಿಕ, ಅತ್ತೆ ಹೊಸದರ್ಲಿ ಲಾಯಿಕ.

294. ಕತ್ತೆ ಮುಂದೆ ಕಾಯಿ ಒಡ್ದಂಗೆ.

295. ಕದ್ದ್ ಮದವೆ ಆನೆ, ಬಗ್ಗಿ ಒಲಗ ಊದು.

296. ಕರಿಯಕೆ ಹಸ್ ಅಲ್ಲ, ಗೈಯಕೆ ಕೋಣ ಅಲ್ಲ.

297. ಕಷ್ಟ ಪಟ್ಟ್ ತಂದದ್ ಗಂಡ, ಸುಖ ಪಟ್ಟ್ ಹೋದ್ ಮಿಂಡ.

298. ಕಷ್ಟ ಪಡದೆ ಸುಖ ಸಿಕ್ಕಿದ್ಯಾ.

299. ಕಳ್ಳಂಗೊಂದು ಸುಳ್ಳು ನೇವನ.

300. ಕಳ್ಳನ ನಂಬಿರೊ ಕುಳ್ಳನ ನಂಬಿಕಾಗದ್.

301. ಕಳ್ಳನ ಮನ್ಸ್ ಹುಲ್ಲೊಳಗೆ.

302. ಕಂಡವರ ಮಕ್ಕಳ ಬಾವಿಗೆ ನೂಕಿ, ಬಾವಿದ್ ಆಳ ನೊಡ್ದಂಗೆ.

303. ಕಟ್ಟುದು ಕಷ್ಟ ಕೆಡ್ದು ಸುಲಭ.

304. ಕಪಿಗೆ ಕಳ್ಳ್ ಕುಡ್ಸಿದಂಗೆ.

305. ಕಣ್ಣ್ ಮನ್ಸದ್ ಕನ್ನಡಿ?

306. ಕಕ್ಕಿದೆ ಮತ್ತೆ ದಕ್ಕುದು.

307. ಕಜ್ಜಿ ಇದ್ದರೆ ತೊರ್ಸಿದೆ, ಅಜ್ಜಿ ಇದ್ದರೆ ಪರ್ಚಿದೆ.

308. ಕಟುಕನ ಹಿಂದೆ ಕುರಿ ಹೋದಂಗೆ.

309. ಕಡಿಯಕಾಗದ ಕತ್ತಿ ಕೈಲಿ ಇದ್ದರೇನ್.

310. ಕತ್ತೆ ಕಾಲಿಗ್ಯಾಕೆ ಕಡ್ಗ.

311. ಕತ್ತೆ ಮೊಲೆಲಿ ಹಾಲಿದ್ದರೇನ್; ಇಲ್ಲದಿದ್ದರೇನ್.

312. ಕತ್ತೆ ಹಂಗಿರುವ ಅತ್ತೆ ಇರೋಕು, ಮುತ್ತಿನಂಗಿರೋ ಗಂಡ ಇರೋಕು
313. ಕಪ್ಪೆ ತಕ್ಕಡಿಗೆ ಹಾಕಿದಂಗೆ.
314. ಕಬ್ಬುನ ಅಂಗಡಿಲಿ ನೊಣಕೆ ಹಬ್ಬ.
315. ಕದಿಯಕೆ ಬಾಕನ ಚೇಳ್ ಕಚ್ಚಿತ್‌ಗಡ.
316. ಕದ್ದ್ ಹೋದ ಮೇಲೆ ಪಾರ ಕುದ್ದಂಗೆ.
317. ಕಳ್ಳ ದೇವುರಿಗೆ ಕೊಳ್ಳಿ ದೀಪ.
318. ಕಳ್ಳಂಗೊಂದು ಪಿಳ್ಳೆ ನೇವನ.
319. ಕದ್ದ್ ಹೋಗಿ ಆರ್ ತಿಂಗಾದ ಮೇಲೆ ನಾಯಿ ಬೊಗಳ್ತ್.
320. ಕಳ್ಳ ಹುಕ್ಕಿದ ಮನೆಲಿ ಎಂತಾರ್ ಸಿಕ್ಕುದು,
ಕೊಳ್ಳಿ ಹೊಕ್ಕಿದ ಮನೆಲಿ ಏನ್ ಸಿಕ್ಕಿಕಿಲ್ಲೆ.
321. ಕಂಡ ದೇವುರಿಗೆಲ್ಲಾ ಕೈ ಮುಗ್ದಂಗೆ.
322. ಕಂಡವರ ದುಡ್ಡು ವಿಷ.
323. ಕಂಡವರ ಮಕ್ಕತ ಕುಂಡೆಗೆ ಒದಿಯಕಾಗದ್.
324. ಕಂಡವರ ಮನೆಂದ ಹೆಣ್ಣ್ ತಂದ್ ಭಂಗ ಬರ್ಸಿಕಾಗದ್.
325. ಕಚ್ಚೆ ಕಟ್ಟುವ ಮಂಜ ಇಲ್ಲದಿದ್ದರೆ, ಎತ್ತ ಬೇಕಾರೂ ಓಡ್ಸುವೆ.
326. ಕಷ್ಟ ಕೊಡುವ ದೇವುರಿಗೆ ಕೋಳಿ ಹಂದಿ,
ಇಷ್ಟ ಪಡುವ ದೇವುರಿಗೆ ಹಣ್ಣ್ ಕಾಯಿ.
327. ಕಟ್ಟಿದ ಮನೆ ಭಾಗ ಅದು ತಪ್ಪಕಿಲ್ಲೆ.
328. ಕಟುಕನ ಮನೆಗೆ ಕುರಿ ಹೋದಂಗೆ.
329. ಕಡಾಯಿ ಹಾಲಿಗೆ ಕಡಾಯಿ ಹೆಪ್ಪು ಹಾಕುವೆನಾ?
330. ಕಣ್ಣ್ ಮುಂದೆ ಇದ್ದರೆ ದನ, ಬೆನ್ನ್ ಹಿಂದೆ ಇದ್ದರೆ ಮಕ್ಕ.
331. ಕತ್ತೆ ಉತ್ತರೆ ಎತ್ತ್ ಯಾಕೆ?
332. ಕತ್ತಗೆ ಸಿಂಗಾರ ಮಾಡ್ರೆ ಕುದುರೆ ಅದೆನಾ.
333. ಕತ್ತೆಗೇನ್ ಗೊತ್ತು ಮುತ್ತ್‌ದ್ ಬೆಲೆ.

334. ಕತ್ತೆಗ್ಯಾಕೆ ಬೇಕು ಹತ್ತಿ ಕಾಳ್.

335. ಕತ್ತೆ ಮೇದ ಕಡೆ ಮತ್ತೆ ಮೇವು ಇಲ್ಲೆ.

336. ಕತ್ತೆ ಮೊಲೆಲಿ ಬಿಂದಿಗೆ ಹಾಲ್ ಇದ್ದರೇನ್.

337. ಕತ್ತೆ ತರ ಅತ್ತೆ ಬೇಕು, ಮುತ್ತ್ ತರ ಮಂಜ ಬೇಕು.

338. ಕದ್ದ ಬದನೆ ಕಾಯಿ, ಕಂಕುಳ್‌ಲಿ ಇಸಿಕಂಡ್ ಮತಾಡ್ದಂಗೆ,

339. ಕದ್ದ್ ಬಸ್‌ರಾನೆ ಕತ್ತೆಗೆ ತೇಳ್ದಂಗೆ.

340. ಕದ್ದ್ ಕಾಣದಂಗೆ ಹೋಳಿಗೆ ಕೊಟ್ರೆ, ತುಪ್ಪ ಹಾಕ್ ತೇಳ್ದಂಗೆ.

341. ಕಬ್ಬಿಣದ ಅಂಗ್‌ಡಿಲಿ ನೊಣಕೇನ್ ಹಬ್ಬ.

342. ಕರ್ಮ ಕತ್ತಲೆ, ಧರ್ಮ ಬೆಳ್‌ಕ್.

343. ಕರ್ಮದ ಮಕ್ಕ ತೊಟ್ಲಲಿ, ಧರ್ಮದ ಮಕ್ಕ ಹೊಟ್ಟೆಲಿ.

344. ಕರ್ದ ಹೆಣ್ಣ್ ಕೊಟ್ಟರೆ ರೋಗ ಬಂದಂಗೆ.

345. ಕವಡೆ ಕಾಸಿಗೂ ಕಿಮ್ಮತ್ತಿಲ್ಲೆ.

346. ಕಷ್ಟ ಇಲ್ಲದೇ ಇಷ್ಟ ಇಡೇರ್ದುಲೆ.

347. ಕಹಿ ಸೋರೆ ಕಾಯಿ, ಕುಡಿ ಆದರೇನ್ ಮಿಡಿ ಆದರೇನ್.

348. ಕಳ್ಕಂಡವರ್ನ ಹುಡುಕುಬಡ, ಹುಡುಕುವವರ್ನ ಹೇಳ್ಬಡ.

349. ಕದ್ ಹೋದ ಮೇಲೆ ಪಾರ ಕುದ್ದಂಗೆ.

350. ಕಳ್ಳನ ಹೆಣ್ಣ್ ಯಾಗೋಳು ಬಿಕಾರಿ.

351. ಕಳ್ಳಂಗೆ ಪಿಳ್ಳೆ ನೇವನ, ಮೈಗಳ್ಳಂಗೆ ಕೂಸುನ ನೇವನ.

352. ಕಳ್ಳನ ಒಟ್ಟೆಗೆ ಕಣಿ ಕೇಳ್ದಂಗೆ.

353. ಕಳ್ಳರ ಮನ್ಸ ಬೂದಿ ಮುಚ್ಚಿದ ಕೆಂಡದಂಗೆ.

354. ಕಳ್ಳರ ಸಂತೆಗೆ ಕಳ್ಳ ಹೋದಂಗೆ.

355. ಕಳ್ಳರ ಮನ್ಸ್ ಹುಲ್ಲೊಳಗೆ.

356. ಕಜ್ಜಿ ಪುರುಕಂಗೆ ಲಜ್ಜೆ ಇಲ್ಲೆ.

357. ಕಂಕಳ್ಳಲಿ ಕೂಸು ಇಸಿಕಂಡ್, ಊರ್ ಇಡಿ ಹುಡುಕಿದಂಗೆ

358. ಕಂಡ ಕೈಗ್ಯಾಕೆ ದುಂಡು ಕಡಗ.
359. ಕಂಡದ್ ಬುಡಿಕಿಲೆ ಮುಂಡೆ ದೆವ್ವ.
360. ಕಂಡಲಿಂದ ಹೆಣ್ಣ್ ತಾಕಾಗದ್. ಉಂಡ ಮನೆಲಿ ಮಲ್ಗಿಕಾಗದ್.
361. ಕಂಡರೆ ಸಹಿಸಿಕಾದುಲೆ, ಕಟ್ಟಿಕಂಡರೆ ಹೆಂಗೆ
362. ಕಂಡರೆ ಕಷ್ಟ, ಕಾಣದಿದ್ದರೆ ಸಂಕಟ.
363. ಕಾರ್ಯ ಬಾಕನ ಕತ್ತೆ ಕಾಲ್ ಹಿಡಿಯೋಕು.
364. ಕಾಮಲೆ ಕಣ್ಣಿಗೆ ಕಂಡದ್ದೆಲ್ಲಾ ಅರಿಶಿಣ.
365. ಕಾಸಿದ್ದರೆ ಕಾರ್ಯ.
366. ಕಾಸಿಗೆ ಗಂಟ್ ಹಾಕಂವ.
367. ಕಾಸ್ ಕೊಟ್ಟ್ ಕೈ ಸುಟ್ಟ್‌ಕಂಡಂಗೆ.
368. ಕಾಡ್ ಹಂದಿ ಗದ್ದೆ ತಿಂದತ್‌ತ, ಊರ್ ಹಂದಿದ್ ಕಿವಿ ಕೊಯ್ದೋ.
369. ಕಾಡ್ ಕೋಳಿಗೆ ಸಂಕ್ರಾತಿ.
370. ಕಾಲ ದೂರಾಕನ; ಕಾಡ್ ಹತ್ತ್‌ರಾದೆ.
371. ಕಾಗೆ ಗೂಡುಲಿ ಕೋಗಿಲೆ ಮೊಟ್ಟೆ ಹಾಕಿದಂಗೆ.
372. ಕಾಣದ ನಂಟ್ರ್ ಬಂದರೆ ಕೋಣ ಹಾಲ್ ಕೊಟ್ಟದ್ಯಾ.
373. ಕಾಣದ ಊರಿಗೆ ನಾಲಿಗೆನೇ ದಾರಿ.
374. ಕಾಣದ ಗಂಡಂಗೆ ಕಾಮಲೆ ಹೆಣ್ಣ್.
375. ಕಾರದ ಗಂಡ, ಕರ್ಮದ ಮಿಂಡ.
376. ಕಾಲ ಹೋದೆ, ಕಾಡ್ ಕಾದದೆ.
377. ಕಾಲ ಅಲ್ಲದ ಕಾಲಲಿ, ಕಾಗೆ ಗೋಡ್ ಕಟ್ಟಿತ್.
378. ಕಾಲಿದ್ದವು ಕೈಲಾಸಕ್ಕೆ ಹೋದರೆ, ನೀನೆಲ್ಲಿಗೆ ಹೊರ್ಟ ಮರ್‌ಳ್ ಆಮೆ?
379. ಕಾಲ್ ನೋಡ್ರೆ ಕಾಂತಿ, ಮುಖ ನೋಡ್ರೆ ವಾಂತಿ.
380. ಕಾಸಿಗೆ ಜಾಣ, ಕೋಟೆಗೆ ಕೋಣ.
381. ಕಾಸಿಗೆ ಕಾಸ್ ಹಾಕಿ, ಬೆನ್ನಿಗೆ ಹೊಟ್ಟೆ ಅಂಟಿತ್.

382. ಕಾಸ್‌ನ ಕಡ್ಲೆನೂ ಬೇಡ, ಹೂಸುನ ವಾಸನೆನೂ ಬೇಡ.

383. ಕಾಸ್‌ನ ಕೊಟ್ಟತ್, ಹೊಗೆಸೊಪ್ಪು ಸುಟ್ಟತ್.

384. ಕಾಸ್ ಕೊಟ್ಟ ಕಡ್ಲೆ ತಕೊಂಬಕ್ಕೆ, ಯಾವ ಅಂಗ್‌ಡಿ ಆದರೇನ್.

385. ಕಿಡಿ ಸಣ್ಣದಾದರೇನ್ ಕಾಡ ಸುಡಿಕೆ.

386. ಕಿವುಡು ಕಿವುಡು ತೇಕನ, ತೌಡು ತೌಡು ತೇಳ್ತ್.

387. ಕಿವಿ ಕಿತ್ತರೂ ಕಿರಿ ಮಂಜನೆ ಒಳ್ಳೆದ್.

388. ಕಿವುಡನ ಹತ್ರ ಗುಟ್ಟ್ ಮಾತ್.

389. ಕುಂಬಾರಂಗೆ ವರ್ಷ ಬಡಿಗೆಗೆ ನಿಮ್ಸ.

390. ಕುಣಿಯಕೆ ಆಗದಂವ ಅಂಗಳ ಡೊಂಕುತ್ತೇಳ್ದಂಗೆ.

391. ಕುರಿ ಕಾಯೆಕೂ ಲಾಯಿಕ್ ಇಲ್ಲೆ.

392. ಕುಲ ನೋಡಿ ಹೆಣ್ಣ್ ಕೊಡು.

393. ಕುಲ ನೋಡಿ ಕೂಸು ಹುಟ್ಟುದುಲೆ.

394. ಕುಲಕ್ಕೆ ಬಡತನ ಇಲ್ಲೆ. ಅನ್ನಕ್ಕೆ ಬಡತನ ಇದ್ದರೂ.

395. ಕುಟ್ಟಿಕಾಗದವುಳಿಗೆ ಕೂಳು ಇಲ್ಲೆ.

396. ಕುಡಿತ ಕೊತ್ತಿಗೆ ಸನ್ನೆ, ಹೊಡಿತ ಗಂಡಂಗೆ ಸನ್ನೆ.

397. ಕುದುರೆ ಕಾಲ್‌ಲಿ ಒದ್ಸಿಕಂಡ್ರೂ ಪರವಾಗಿಲ್ಲೆ, ಕತ್ತೆ ಮೇಲೆ ಕೂರಿಕಾಗದ್.

398. ಕುರಿ ಕಾಯಿ ಕುದುಕ ತೇಕನ, ಸಂಬಳೇನೇ ಬ್ಯಾಡ ತೇಳ್ತ್.

399. ಕುರಿಕಾಯಕೆ ಕುದುಕನ ಬುಟ್ಟಂಗೆ.

400. ಕುಂಟನ ದಿಬ್ಬಣ ನಡುಮನೆಗೆ ಬಾಕನ, ಕುರುಡಿನಾ ಕೊಟ್ಟ್ ನಾ ಗೆದ್ದೆ.

401. ಕುರುಡನ ನೀರಿಗೆ ಕಳ್ಸಿ, ಮನೆವು ನಿದ್ದೆ ಕೆಟ್ಟಂಗೆ.

402. ಕುಟ್ಟುಕಾಗದವುಳ್ನ, ಬೀಸಕಾಗದವುಳ್ನ, ನೀರ್ ತಾಕಾದದವುಳ್ನ ತಂದ್ ಅಕ್ಕತಂಗೆಗಳೊಟ್ಟಿಗೆಲ್ಲಾ ಸಿಟ್ಟಾತ್.

403. ಕುಟ್ಟುವವಳಿಗಿಲ್ಲೆ, ಬೀಸಿದವುಳಿಗಿಲ್ಲೆ, ಕುದ್ದ್ ತಿಂಬವುಳಿಗ್ಯಾಕೆ ಸೋಬಾನೆ.

404. ಕುಡ್ಡವಂಗೆ ಗೊತ್ತುಟ್ಟಾ ಗುಟ್ಟ್ ಮಾತ್.

405. ಕುಡ್ದರೆ ಗುಟ್ಟು ರಟ್ಟಾದೆ.
406. ಕುಣ್ದರೆ ಅನ್ನ ಬೆಂದದ್ಯಾ.
407. ಕುದರೆ ಬಾಯಿ, ಕಳ್ಳನ ಕೈ ಸುಮ್ಮನಿರ್ದುಲೆ.
408. ಕುಯ್ದರೆ ಕುಯ್ಕ, ಬಯ್ದರೆ ಬಯ್ಕ.
409. ಕಲ್ಲ್ ಮ್ಯಾಲೆ ಹಾಕಿ ಅರ್ದರೂ, ನನ್ನ ಮೈ ಅರಿಶಿಣ, ಕುಂಕುಮ.
410. ಕುಯ್ಯನ ತೇಳಿರೆ ಮೊಟ್ಟೆಕೋಳಿ, ತರೋನ ತೇಳಿರೆ ದುಡ್ಡು ಇಲ್ಲೆ, ವಕ್ಕರ್ಸ್‌ದೆ ಹೋಕಿಲೆ ಹೊಸ ನೆಂಟ.
411. ಕುರಿಗೇನ್ ಗೊತ್ತು ಕಸ್ತೂರಿ ವಾಸನೆ.
412. ಕುರುಕುಲು ತಿನಿ ಕಲ್ತವುಳು, ಮುರುಕುಲು ಮನೆ ಮಾರ್ತ್.
413. ಕುರುಡ ಕಣ್ಣ್ ಮುಚ್ಚಿರೊ ಒಂದೆ, ಬುಟ್ಟರೂ ಒಂದೆ.
414. ಕುಲ ಬುಟ್ಟರೂ ಛಲ ಬುಡಿಕಾಗದ್.
415. ಕುಳಕ್ಕೆ ಬಡತನ ಇರ್ದು, ಕುಲಕ್ಕೆ ಬಡತನ ಇಲ್ಲೆ.
416. ಕುಂಡೆಗೆ ಒದ್ದದಿಕೆ ದವುಡೆ ಹಲ್ಲ್ ಉದ್ರ್ತ್.
417. ಕೂಸು ಹುಟ್ಟಿಕೆ ಮುಂದೆ ಕುಲಾಯಿ ಹೊಲ್ಸಿತ್.
418. ಕೂದಲಿದ್ದರೆ ಯಾರ್ ಕಟ್ಟಿರೂ ಲಾಯಿಕ
419. ಕೂಳ್ ಬೇಡತ್ತಾದರೆ, ಬರ ಬಂದರೇನ್ ಬುಟ್ರೇನ್
420. ಕೆಟ್ಟ ಮೇಲೆ ಬುದ್ಧಿ ಬಾತ್, ಅಟ್ಟ ಹತ್ತಿ ಒಲೆ ಹೊತ್ತಿತ್.
421. ಕೆಳಗೆ ಇಸಿರೆ ಪಿಜ್‌ನ ತಕಂಡ್ ಹೋದೆ, ಮೇಲೆ ಇಸಿರೆ ಕಾಗೆ ತಕಂಡೋದೆ.
422. ಕೆರೆ ನೀರ್ ಕೆರೆಗೆ ಚೆಲ್ಲಿದಂಗೆ.
423. ಕೆಲ್ಸ ಇಲ್ಲದ ಕುಂಬಾರ ಮಗಳ ತಿಕ ತಟ್ಟಿತ್ತ್.
424. ಕೆಲ್ಸ ಇಲ್ಲದ ಆಚಾರಿ ಕೂಸುದ್ ಕುಂಡೆ ಕೆತ್ತಿತ್ತ್.
425. ಕೆಲ್ಸಕ್ಕೆ ಕರಿಬಡಿ, ಊಟಕೆ ಮರಿಬಡಿ.
426. ಕೇಡ್ ಕಾಲಕ್ಕೆ ಬುದ್ಧಿ ಬಾತ್.
427. ಕೆಟ್ಟವುಳಿಗೆ ಹಿಟ್ಟ್‌ನ ಮಡಿಕೆ ಸಿಕ್ಕಿದಂಗೆ.

428. ಕೆಟ್ಟಿರ್‌ಕನ ನೆಂಟ್ರಿಲ್ಲೆ, ಭಿಕ್ಷೆ ಬೇಡ್‌ಕನ ದೇವುರಿಲ್ಲೆ.
429. ಕೆಮ್ಮುಲು ಇದ್ದರೂ ನಮ್ಮವುಳೆ ಸರಿ.
430. ಕೆರೆ ನೀರ್ ಚೆಲ್ಲಿ ಬಾವಿ ನೀರ್ ತಾತ್.
431. ಕೆಸ್ರಿಗೆ ಹಾಕಿದ ಕಂಬದಂಗೆ.
432. ಕೆಲ್ಸಕೆ ಹೇಳಿರೆ ಕೂಸುದು ನೇವನ.
433. ಕೆಲ್ಸ ಇಲ್ಲದ ಹಜಾಮ ಕೂಸುನ ತಲೆ ಬೋಳ್ಸಿತ್.
434. ಕೆಲ್ಸ ಆಕುತ್ತಾದರೆ ಕತ್ತೆದೂ ಕಾಲ್ ಹಿಡಿಯೋಕು.
435. ಕೆಟ್ಟ್ ಸುಣ್ಣಾಗುಟ್ಟು.
436. ಕೆಚ್ಚಲ್‌ಲಿ ಇದ್ದರೂ, ಉಣ್ಣೆ ಕುಡಿಯದು ರಕ್ತ
437. ಕೆಟ್ಟಿರ್ದನ ಬುಟ್ಟ್ ಇರುವವಳೇ ಜಾಣೆ
438. ಕೆರೆ ನೀರಿಗ್ಯಾಕೆ ಚೋಳರಾಯನ ಅಪ್ಪಣೆ.
439. ಕೆಲ್ಸ ಇಲ್ಲದಂವ ಮಗಳ ತಲೆ ಬೊಳ್ಸಿದಂಗೆ
440. ಕೆಳಗೆ ಬಿದ್ದರೆ ಕಾಲ್ ಹಿಡ್ಕ, ಮೇಲೆ ಬಿದ್ದರೇ ಜುಟ್ಟ್ ಹಿಡ್ಕ
441. ಕೆಟ್ಟ್ ಸುಣ್ಣಾಗುಟ್ಟು
442. ಕೇಡ್ ಕಾಲಕ್ಕೆ ಕೆಡ್‌ಕ್ ಬುದ್ಧಿ.
443. ಕೇಡ್ ಕಾಲಕ್ಕೆ ನಾಯಿ ಮೊಟ್ಟೆ ಹಾಕಿತ್.
444. ಕೈ, ಬಾಯಿ, ಕಚ್ಚೆ ಮೂರೂ ಸರಿ ಇರೋಕು.
445. ಕೈಲಾಗದಂವ ಬೆರೆಳ್ ಕಚ್ಚಿದಂಗೆ.
446. ಕೈಗೆ ಸಿಗದ ಗಂಡ, ಮಲ್ಗ್‌ಕಾಕನ ಸಿಟ್ಟಾತ್.
447. ಕೈ ನೋಡಿ ಬಳೆ ಹಾಕ್, ಮುಖ ನೋಡಿ ದಾರೆ ಹುಯ್ಯಿ.
448. ಕೈಲಿ ಕಾಸಿಲ್ಲೆ ಕಾರ್ಬಾರ್ ದೊಡ್ಡದ್.
449. ಕೈಲಿ ಆಗದಂವ ಮಲಿಗಿಕಾನ ಸರಿಯಗಿ ಸಿಟ್ಟ್ ಮಾಡಿಕಂಡತ್
450. ಕೈ ಮ್ಯಾಲೆ ನೀರ್, ಎಲೆ ಮ್ಯಾಲೆ ಪಾಯಸ ನಿಲ್ಲುದುಲೆ.
451. ಕೈಲಿ ಬ್ಯಾಟರಿ ಮನೇಲಿ ಲಾಟರಿ

452. ಕೈ ಹಿಡ್ದ ಹೆಣ್ಣ್ ಬೆನ್ನ ಹತ್ತಿದ್ದ ಚರ್ಮ.

453. ಕೊಟ್ಟಂವ ಕೋಡಂಗಿ ತಕಂಡಂವ ಈರಭದ್ರ.

454. ಕೊಟ್ಟ್ ಸಿಟ್ಟಾದೊಕ್ಕಿಂತ್,ಕೊಡದೆ ಸಿಟ್ಟಾದು ಒಳ್ಳೆದ್.

455. ಕೊಟ್ಟ ಹಣನೂ, ಮಸಣಕ್ಕೆ ಹೋದ ಹೆಣನೂ, ವಾಪಸ್ ಬಾದುಲೆ.

456. ಕೊಂದ ಪಾಪಕ್ಕೆ ತಿಂದ್ ಪರಿಹಾರ.

457. ಕೊಡವು ಇದ್ದರೆ ಕೈ ಒಡ್ಡವು ಜಾಸ್ತಿ.

458. ಕೊಡವುಕೆ ಕೊಡ್ತ್‌ಲೆ, ನಟ್ಟ ಮರಕ್ಕೆ ನೀರ್ ಹೊಯ್ತ್‌ಲೆ.

459. ಕೊಟ್ಟ ಸಾಲ ಕೇಳದೇ ಹೋತ್, ಮಾಡ್ದ ಗದ್ದೆ ನೋಡದೇ ಹೋತ್.

460. ಕೊಡಿಕಾಗದವುಕೆ ಕೊಟ್ಟ್ ನೋಡು, ಇಕ್ಕಿಕಾಗದವುಳಿಗೆ ಇಕ್ಕಿ ನೋಡು.

461. ಕೊಟ್ಟ ಎತ್ತ್ ಹೆಗೆಲ್ ಪೂಜಿಕಾಗದ್,
ಬುಟ್ಟ್ ಹೆಣ್ಣ್‌ನ ಮುಖ ನೋಡಿಕಾಗದ್.

462. ಕೊತ್ತಿ ಬಡಕ್‌ಲಾದರೆ ಕೋಳಿ ಕೊಕ್ಕಿ ನೋಡ್ತ್.

463. ಕೊತ್ತಿ ಸಿಟ್ಟ್ ಮಾಡಿಕಂಡ್ ಮನೆ ಹಿಂದೆ ಹೋಗಿ ಕತ್ತಲೆ ಆಕನ ಬಾತ್.

464. ಕೊಂಬು ಹಿಡ್ಡಂವ ಕೆಡಿಕಿಲ್ಲೆ, ಅಂಬು ಹಿಡ್ಡಂದ ಓಡಿಕಲ್ಲೆ.

465. ಕೊಟ್ಟ ಮನೆಲಿ ಅಟ್ಟ್ ಇಕ್ಕಿತ್‌ಲೆ, ಕಟ್ಟೆಂದ ನೀರ್ ತಾತ್‌ಲೆ,
ಇದ್ದರೆ ಇತ್ತ್ ಹೋದರೆ ಹೋತ್.

466. ಕೊಟ್ಟ ಸಾಲ ಕೇಳದೆ ಹೋತ್, ಮಾಡ್ದ ನೆಲ ನೋಡದೇ ಹೋತ್.

467. ಕೊಟ್ಟ್ ದೂರಿಕಾಗದ್ ಇಸಿ ಹಂಗಿಸಿಕಾಗದ.

468. ಕೊಟ್ಟ್ ಕೆಟ್ಟಂವ ಇಲ್ಲೆ, ತಿಂದ್ ಬದ್‌ಕಿದಂವ ಇಲ್ಲೆ.

469. ಕೊಡ್ದೆಲ್ಲಾ ಕೊಟ್ ನಂಗೆಂತ ಉಟ್ಟು.

470. ಕೊಡ್ದು ಮೂರು ಕಾಸ್,ಕೋಣೆ ತುಂಬಾ ಹಾಸ್ ತೇಳಿರೆ,
ಹಾಸಿರೆ ಹಾಸ್ ಇಲ್ಲರೆ ಬಿಸಾಕ್ ನನ್ನ ಕಾಸ್.

471. ಕೊತ್ತಿ ಕೊಂದ ಪಾಪ, ಸುಟ್ಟ್ ತಿಂದರೂ ಹೋಕಿಲೆ.

472. ಕೋಮಟಿ ನಡಿಯಕನ ಕೋಮಣ ಜಾರ್ದು, ಲೆಕ್ಕಚಾರ ಜಾರಿಕಿಲೆ.

473. ಕೋಣನಂತ ಮಗಳ್ನ ಕೋಣೆಲಿ ಕೂರ್ಸಿ,
ಅವ್ವ ಬಾತ್ ಅಳಿಯಂಗೆ ಇಕ್ಕಿಕೆ.

474. ಕೋಮಟಿ ಮೋಸ ಹೋಕಿಲ್ಲೆ, ಹೋದರೂ ಹೇಳಿಕಿಲ್ಲೆ.

475. ಕೋಳಿ ಹೆಚ್ಚಾತ್ ಅಂಗಳ ಹಾಳಾತ್.

476. ಕೋಳಿ ಕೇರಿ ಕೇರಿ ಮೂರು ಕಾಸ್ ಮಾಡ್ತ್.

477. ಕೋಟೆ ಮೇಲೆ ಕಣ್ಣ್, ರಾಟೆ ಮೇಲೆ ಕೈ.

478. ಕೋಣ ಕಪಾಳಕ್ಕೆ ಹೊಡ್ದರೆ, ಜಾಣ ಕಿವಿ ಹಿಂಡಿ ಹೇಳ್ದೆ.

479. ಕೋಣೆ ಕೊಳ್ಕ್, ನಡುಮನೆ ಬೆಳ್ಕ್.

480. ಕೋಣೆ ಮಕ್ಕ ಕೊಳ್ತವೆ, ಬೀದಿ ಮಕ್ಕ ಬೆಳ್ದವೆ.

481. ಕೋಳಿ ಕಾಲಿಗೆ ಗೆಜ್ಜೆ ಕಟ್ಟಿರೆ, ಹೇಲ್ ಕೆದುಕುದು ಬುಟ್ಟದ್ಯಾ.

482. ಕೋಣನ ಮುಂದೆ ಕಿನ್ನರಿ ಬಾರ್ಸಿದಂಗೆ.

483. ಕೋಳಿ ಕೇಳಿ ಮಸಾಲೆ ಅರಿಯೋಕುತ್ತಿಲ್ಲೆ.

484. ಕೋಳಿ ನಿದ್ದೆ ಆತ್.

485. ಕೋಳಿ ಸಾಕಿದವನ ಮನೆ ಸುತ್ತ ಹೇಲ್.

486. ಗಟ್ಟಿ ಇದ್ದರೆ ರೊಟ್ಟಿ ತಟ್ಟಿದೆ, ತೆಳ್ಳಂಗಾದರೆ ದೋಸೆ ಹೊಯ್ದೆ.

487. ಗಡಿಗೆ ಪಾಲಾದರೆ ಒಡು,ಮನೆ ಪಾಲಾದರೆ ಪಾಡ್

488. ಗತಿ ಇಲ್ಲದ ಗಂಡನ ಸೇರಿ, ಹಾಂತೆ ಕಚ್ಚಿ ಜೀವ ಹೋತ್

489. ಗದ್ದೆಗೆ ಏರಿ ಇರೋಕು, ಹೆಣ್ಣಿಗೆ ತೌರು ಇರೋಕು.

490. ಗಂಡಂಗೆ ಗಂಡನೂ ಅಲ್ಲ, ಮಿಂಡಂಗೆ ಮಿಂಡನೂ ಅಲ್ಲ.

491. ಗಂಡಂಗೆ ಗಂಟ್ ತೊರ್ಸಿಕಾಗದ್, ಮಕ್ಕಳಿಗೆ ತಿಂಡಿ ತೋರ್ಸಿಕಾಗದ್.

492. ಗಂಡ್ಸಿಂಗೆ ಎದೆ ಗಟ್ಟಿ ಇರೋಕು, ಹೆಂಗ್ಸಿಗೆ ಬಾಯಿ ಸರಿ ಇರೋಕು.

493. ಗಂಡ ಪಟ್ಟೆ ಸೀರೆ ತಂದೆತಾ, ಹೆಣ್ಣ್ ಉಟ್ಟ ಸೀರೆ ಬಿಚ್ಚಿ ಒಲೆಗೆ ಹಾಕಿತ್.

494. ಗಂಡ ಹೆಣ್ಣ್‌ನ ಜಗಳ ಉಂಡು ಮಲ್ಗ್‌ವವರೆಗೆ.

495. ಗಂಜಿ ಕುಡ್ದರೂ ಗಂಡನ ಮನೆಲೆ ಇರೋಕು.

496. ಗಂಗೆಲಿ ಸ್ನಾನ, ತುಂಗೆಲೆ ಪಾನ.

497. ಗಂಟ್ಲಿಗೆ ಗಾಲ, ಎದೆಗೆ ಶೂಲ.

498. ಗಂಟಿಗೆ ಗಂಟೂ ಇಲ್ಲೆ, ನಂಟಿಗೆ ನಂಟೂ ಇಲ್ಲೆ.

499. ಗಂಡ ಗಾಳಿ ಪಾಲ್, ಹೆಣ್ಣ್ ಬೀದಿ ಪಾಲ್.

500. ಗಂಡ ಸತ್ತ ಮೇಲೆ ಹೆಣ್ಣ್ ಬುದ್ಧಿವಂತೆ.

501. ಗಂಡಾಗಿ ಹುಟ್ಟಿದ ಮೇಲೆ ಮೀಸೆ ಬಾರದೆ ಇದ್ದದ್ಯಾ.

502. ಗಂಡನ ಆಸ್ತಿ ಮಿಂಡನ ಪಾಲಾತ್.

503. ಗಂಟ್ ಮುಖ ಕಟ್ಟಿಕಂಡ್, ಎಂಟೆಂಟೂ ದಿನಕ್ಕೂ ಜಗಳ.

504. ಗಂಡಂಗೆ ಬೇಡಾತಾದರೆ ಗುಂಡ್ ಕಲ್ಲಿಗೂ ಬೇಡ.

505. ಗಂಡ ಬೈದರೆ ಸಿಟ್ಟ್, ಮಿಂಡ್ ಬೊಯ್ದರೆ ಹುಸಿ ನಗೆ.

506. ಗಂಡ ಮುನಿ. ಹೆಣ್ಣ್ ಪ್ರಚಂಡಿ.

507. ಗಂಡನ ಹತ್ರ ಕೂಸು ನಿಲ್ಲುದುಲೇ, ಹೆಣ್ಣ್‌ನ ಹತ್ರ ಕಾಸ್ ನಿಲ್ಲಿಕಿಲ್ಲೆ.

508. ಗಂಡ್ ಕುಡ್ದ್ ಹಾಳಾತ್, ಹೆಣ್ಣ್ ತಿರ್‌ಗಿ ಕೆಟ್ಟತ್.

509. ಗಂಡ ಹಟಮಾರಿ ಹೆಣ್ಣ್ ಹೆಮ್ಮಾರಿ.

510. ಗಂಡಾಗಿ ಹುಟ್ಟಿದ ಮ್ಯಾಲೆ ಮೀಸೆ ಬಾರದೆ ಇದ್ದದ್ಯಾ?

511. ಗಂಧ ಮಾರುವವನ ಹೆಣ್ಣ್‌ಗೆ ಬಿದರ್ ಕಡ್ಡಿ ಮೂಗುತ್ತಿ.

512. ಗಾಣಿಗಿತ್ತಿ ಅಯ್ಯೋ ತೇಳಿರೆ, ಕೂಸುನ ನೆತ್ತಿ ತಂಪಾದ್ಯಾ.

513. ಗಾಳಿ ಬಂದ ಕಡೆ ತೂರಿಕಣಕು.

514. ಗಾಳಿಗೆ ಗುದ್ದಿ ಮೈಕೈ ಬ್ಯಾನೆ ಮಾಡಿಕಂಡಂಗೆ.

515. ಗಿಳಿ ಮೂರು ಮಾತ್ ಕಲ್ತ್, ತನ್ನ ಹೇಲ್ ತಾನೇ ತಿಂದತ್.

516. ಗುರುತು ಕಂಡ ಕಳ್ಳ ಜೀವ ಉಳ್ಸಿಕಿಲ್ಲೆ.

517. ಗುರು ಇಲ್ಲದವನ ತಲೆಗೆ ವಿದ್ಯೆ ಹತ್ತಿಕಿಲ್ಲೆ.

518. ಗುಂಪಲಿ ಗೋವಿಂದ.

519. ಗುಣ ನೋಡಿ ಹೆಣ್ಣ್ ತರೋಕು, ಹಾಲ್ ನೋಡಿ ಹಸ್ ತರೋಕು.

520. ಗುಡ್ಸಿ ಗುಂಡಾಂತರ ತೇಕ್ತ್.

521. ಗೂಡೆ ಕಡೆಕಡೆಗೆ ಪೀಡೆ.

522. ಗೆದ್ದಲ್ ಹುತ್ತ ಕಟ್ರೆ, ಹಾವು ಮನೆ ಮಾಡಿಕಂಡದೆ.

523. ಗೇಣುದ್ದ ಹೊಟ್ಟೆಗೆ ಮಾರುದ್ದ ಬಟ್ಟೆ.

524. ಗೇಣುದ್ದ ಹೊಟ್ಟೆ ತುಂಬಿರೆ, ಮಾರುದ್ದ ಗುಂಡಿ ಮುಚ್ಚಕ್.

525. ಗೋಡೆ ಮೇಲೆ ಅಡ್ಡ ದೀಪ ಇರ್ಸಿದಂಗೆ.

526. ಗೌಡ ಅವರೆ ಕಾಯಿ ಕೊಯ್ತ್ ಗಡ.

527. ಚರ್ಮ ತೊಳ್ದರೆ ಕರ್ಮ ಹೋದ್ಯಾ?

528. ಚಿನ್ನದ ಕತ್ತಿತಾ ಮೂಗೂ ಕೊಯ್ಯಿಕೆ ಅದುಲೆ.

529. ಚಳಿಗಿಲ್ಲದ ಕಂಬುಳಿ ಎಲ್ಲಿ ಇದ್ದರೇನ್?

530. ಚಂಡಾಲ ದೇವುರಿಗೆ ಚಪ್ಪಲ್‌ಲಿ ಪೂಜೆ.

531. ಚಾಟಿ ಇಲ್ಲದೇ ಬುಗುರಿ ಆಡ್ಸೋಳು,ಹಗ್ಗ ಇಲ್ಲದೇ ತೊಟ್ಲ್ ಆಡ್ಸುದು.

532. ಚಿಂತೆ ಇಲ್ಲದವಂಗೆ ಸಂತೆಲಿ ನಿದ್ರೆ.

533. ಚಿನ್ನದ ಕತ್ತಿತಾ ಕುತಿಗೆ ಕೊಯ್ಯಕಾದುಲೆ.

534. ಚಿನ್ನದ ಹರಿವಾಣಕ್ಕೆ ಬದುಕಿದ್ದರೂ , ಮಣ್ಣ್‌ನ ಗೋಡೆಗೆ ಒರ್‍ಗೊಕು

535. ಚೌರಕ್ಕೆ ಕುದ್ದರೆ ಸೀನಿಕಾಗದ್, ಕಳ್ಳತನಕ್ಕೆ ಹೋಕನ ಕೆಮ್ಮಿಕಾಗದ್.

536. ಛೀ ಥೂತ ಹೇಳ್ಸಿಕಂಬಕಾಗದ್.

537. ಜನ ಆಡ್ದೂ ಹಂಗೆ, ನೀ ಮಾಡ್ದೂ ಹಂಗೆ.

538. ಜನ ಮರುಳೋ, ಜಾತ್ರ ಮರುಳೋ.

539. ಜಲ ನೋಡಿ ಬಾವಿ ತೋಡು, ಕುಲ ನೋಡಿ ಹೆಣ್ಣ್ ಕೊಡೋಕು.

540. ಜನ ಮೆಚ್ಚಲಿ ಕುಣಿ ಮಗಳೆತ ಹೇಳ್ತ್.

541. ಜನಿವಾರ ಹಾಕಿದವರ್‍ನ ಜಾಸ್ತಿ ನಂಬಿ ಕಾಗದ್.

542. ಜಲ ಮೂಲನೂ, ಖುಷಿ ಮೂಲನೊ ಹುಡಿಕಿಕಾಗದ್.

543. ಜನರ ಬಾಯಿಲಿ ಬೇಯಕಾಗದ್.

544. ಜಾತಿ ನಾಯಿತ ಪಲ್ಲಕ್ಕಿಗೇರ್ಸಿರೆ, ಹೇಲ್ ಕಾಂಬಕನ ಹಾರಿ ಬೀತ್.
545. ಜಾತಿಗೆ ಜಾತಿ ವೈರಿ ನೀರಿಗೆ ಪಾಚಿ ವೈರಿ.
546. ಜಾಣಂಗೆ ಕಣ್ಣ್ ಸನ್ನೆ ಕೋಣಂಗೆ ದೊಣ್ಣೆ ಸನ್ನೆ.
547. ಜಾತಿ ಬುಟ್ಟರೂ ನೀತಿ ಬುಡಿಕಾಗದ್.
548. ಜೇನ್ ತೆಗ್ದಂವ ಕೈ ನೆಕ್ಕಿ ನೊಡದೆ ಇದ್ದದ್ಯಾ.
549. ಜೋಬುಲಿ ದುಡ್ಡ ಇದ್ದರೆ ಜನ ಬೇಕಾಷ್ಟ್ ಇದ್ದವೆ.
550. ಜ್ಯೋತಿ ಇಲ್ಲದ ಮನೆಯಾಗೋಳು ಕತ್ತಲೆ.
551. ಡೊಂಕು ಸೌದೆಗೆ ಬೆಂಕಿ ಮದ್ದು.
552. ತನ್ನ ತಿಕ ತಾನೆ ತೊಳ್ಕಂಬಕೆ ಆದುಲೆ.
553. ತಲೆ ಇದ್ದರೆ ಎಲೆ ಮಾರಿ ಬದ್‌ಕಕ್.
554. ತಲೆಲಿ ಸಗಣಿ ತುಂಬಿಟ್ಟು.
555. ತನ್ನ ಬಟ್ಲ್‌ಲಿ ಆನೆ ಇದ್ದರೂ, ಇನ್ನೊಬ್ಬರ ಬಟ್ಲ್‌ಲಿ ನೊಣ ಹುಡ್ಕುದು.
556. ತಗ್ಗಿದ್ದ ಕಡೆಗೇ ನೀರ್ ಹರಿಯದು.
557. ತಗ್ಗಿ ಬಗ್ಗಿ ನಡೆಯೋಕು.
558. ತನ್ನ ಬೆನ್ನ್ ತನಿಗೇ ಕಾಂಬದುಲೆ
559. ತಬ್ಬಲಿನ ತಂದ್ ತಲೆ ಬೋಳ್ಸಿದೋ.
560. ತಮಟೆಗೆ ಒಂದು ಕಡೆ ಏಟ್, ಡೋಲಿಗೆ ಎರಡ್ ಕಡೆ ಏಟ್.
561. ತರ್ಲೆ ಅಪ್ಪಂಗೆ ತಾಪತ್ರೆ ಮಂಜ.
562. ತರ್‌ಕನ ಕುಸಿ ಕೊಡ್‌ಕನ ಬಿಸಿ.
563. ತವರು ಮನೆ ತುಪ್ಪಕ್ಕಿಂತ, ಗಂಡನ ಮನೆ ಗಂಜಿ ಲೇಸ್.
564. ತಂದ್ ಹಾಕಿಕಾಗದವಂಗೆ, ಮನೆ ತುಂಬ ಮಕ್ಕ.
565. ತಾನ್ ತಿಂಬಕೆ ತೌಡಿಲ್ಲೆ, ವಾರಕೊಂದು ಹಂದಿ ಸಾಕಿದೆ.
566. ತಾಳ್ದಂವ ಬಾಳ್ದೆ.
567. ತಾಳ ಹಾಕಿಕೆ ಹೋಗಿ ತರಡ್ ಸಿಕ್ಕಿಸಿ ಕಂಡತ್.

568. ತಿಂಬಕೆ ಅಂಬುಲಿಗೂ ಗತಿ ಇಲ್ಲೆ.
569. ತೀಟ ತಿರ್ಸಿಕಂಡ ಮೇಲೆ ಜಾಗ ಖಾಲಿ ಮಾಡ್ತ್.
570. ತೀರ ಮುಳ್ಗಿದವಂಗೆ ಚಳಿ ಇಲ್ಲೆ.
571. ತೀಟ ತೀರ್ಸಿಕಂಬಕೆ ಮದುವೆ ಆತ್.
572. ತುಂಬಿದ ಬಿಂದಿಗೆ ಚೆಲ್ಲುದುಲೆ.
573. ತುಂಬಿದ ಕೆರೆನೂ, ತುಂಬಿದ ಮನೆನೂ ಒಡಿಯಕಾಗದ್.
574. ತುಂಬಿದ ಕೆರೆಗೆ ಕಲ್ಲ್ ಹಾಕಿದಂಗೆ
575. ತೂಕಡಿಕೆ ಬಂದವಂಗೆ ಹಾಸಿಗೆ ಕೊಟ್ಟಂಗೆ.
576. ತೂತು ಒಲೆ ಕೆಡ್ಸಿತ್,ಮಾತ್ ಮನೆ ಕೆಡ್ಸಿತ್
577. ತೂಗುವ ಕಲ್ಲ್ ಮೇಲೆ, ನಾಯಿ ಉಚ್ಚೆ ಹೊಯ್ದರೆ, ತೂಕನೇ ಹೋತ್
578. ತೆಂಗಿನ ಮರ ನೆಟ್ಟಿದ್ದರೆ ಎಳೆ ನೀರ್ ಕೊಡ್ತಾ ಇತ್
ಪ್ರಾಯಕ್ಕೆ ಬಂದ ಮಕ್ಕಳ್‌ಂದ ಕಣ್ಣೀರ್ ಸಿಕ್ಕಿ ಹೋತ್.
579. ತೇರ್ ಹೋರ್ಟ ಮೇಲೆ ಜಾತ್ರೆಗೆ ಹೋಕು
ಧಾರೆ ಆದ ಮೇಲೆ ಮದುವೆಗೆ ಹೋಕು.
580. ತೆವುಲಿಗೆ ಮದುವೆ ಆದಂಗೆ
581. ತೋಟಕ್ಕೆ ಹುಕ್ಕಿದ ದನ ಸುಮ್ಮನೆ ಇರ್ದುಲೆ.
582. ತೊಟ್ಟ್ ಮಾಗಿದ ಹಣ್ಣ್ ಒಂದೇ, ಕಟ್ಟ್ ಮೀರ್ದ್ ಹೆಣ್ಣ್ ಒಂದೆ
583. ತೋಟಕ್ಕೆ ಹೋಗಿ ತೇಕ್ ತೇಳ್ತ್,ಮನೆಗೆ ಬಂದ್ ಇಕ್ಕ್ ತೇಳ್ತ್
584. ದರಿದ್ರ ಹೋದಲೆಲ್ಲಾ ಅನಿಷ್ಟನೇ.
585. ದಡ್ಡಂಗೆ ಬುದ್ಧಿ ಹೇಳ್ದಂಗೆ.
586. ದರಿದ್ರ ಗಂಡ ದಂಡಿಗೆ ಹೋದರು, ದರಿದ್ರ ತಪ್ಪಿತ್‌ಲೆ.
587. ದಡ್ರಿಗೆ ಒಂದೇ ದಾರಿ, ದಡ್ಡ ಜಾಣ್‌ರಿಗೆ ಎರಡ್ ದಾರಿ
ಜಾಣ ಜಾಣರಿಗೆ ಮೂರು ದಾರಿ
588. ದರಿದ್ರಂಗೆ ಬುದ್ಧಿ ಇದ್ದರೆಷ್ಟ್ ,ಬುಟ್ಟರೆಷ್ಟ್

589. ದಡ್ಡಂಗೆ ಹೆಣ್ಣ್ ಯಾರ್ ಕೊಟ್ಟವೆ ತೇಳಿರೆ
ನಮ್ಮ ಚಿಕ್ಕಪ್ಪನ ಮನೇಲಿ ಸುಮಾರ್ ಒಳ.

590. ದಂಡಿಗೆ ಹೆದರ್ತ್‌ಲೆ ದಾಳಿಗೆ ಹೆದ್‌ರ್ತ್‌ಲೆ ಇನ್ನ್ ನಿಂಗೆ ಹೆದ್‌ರ್‌ನೆನಾ.

591. ದಂಡ್ ಬಂದರೇನ್ ದಾಳಿ ಅದರೇನ್ ಉಂಡ್ ಮಲ್ಗಿದೆ.

592. ದಾಕ್ಷಿಣ್ಯಕ್ಕೆ ಬಸ್‌ರಿ ಆತ್, ಹೆರಿಗೆಗೆ ಜಾಗ ಇಲ್ಲೆ.

593. ದಾರಿಲಿ ಹೋಗುವವಂಗೆ ಅರ್ದ ರೊಟ್ಟಿ ಕೊಟ್ಟರೆ, ಇಡೀ ರೊಟ್ಟಿ ಕೇಳ್ದೆ.

594. ದಾರಿಲಿ ಹೋಗುವ ಮಾರಿನ, ಮನೆಗೆ ಕರ್ದಂಗೆ.

595. ದಾರಿಲಿ ಇದ್ದ ಕಲ್ಲನ, ಎಳ್ದ್ ಎದೆಮೇಲೆ ಹಾಕಿಕಂಡಂಗೆ.

596. ದಾಸಂಗೆ ಯಾವ ಮನೆ ಆದರೆ ಎನ್ ಶಂಖ ಊದಿಕೆ.

597. ದಾಸ ಬಾತ್ ನೀರ್ ಕುಡ್ತ್ ನಿಗ್‌ರಿ ಕಂಡ್ತ್.

598. ದಾರಿಲೀ ಹೋಗುವವನ ಅಪ್ಪಾ ತೇಳಿರೆ, ಯಾರಿಗೆ ಹುಟ್ಟಿದ ಮಂಜ?

599. ದಾರಿಲೆ ಹೋಗಂವ ಸತ್ತತ್, ದನ ಕಾಯುವಂವ ಅತ್ತತ್.

600. ದಾಸಪ್ಪ ಬಂದಂಗೆ ದಾಸಮ್ಮ ಮೊರ ಹಿಡ್ಕಂಡ್ ಬಾತ್.

601. ದಾಸ ನೆಂಟ ಅಲ್ಲ, ದೋಸೆ ಕಡುಬು ಅಲ್ಲ.

602. ದಾರೆ ಆದ ಮೇಲೆ ಮುದುಕ ಆದಂಗೆ,
ಖಾರ ಕಡ್ದ್ ಮೇಲೆ ಉದುಕ ಆದಂಗೆ.

603. ದಿನ ಬಂದರೂ ಖಿನ ಬಾತ್‌ಲೆ.

604. ದಿನ ದೂಡ್ದೆ ಅಷ್ಟೇ.

605. ದಿನ ಕಳಿಯೋಕು.

606. ದುಡ್ದ್ ತಂದದ್ದೋ, ಪಡ್ದ್ ಬಂದದ್ದೋ?

607. ದುಡ್ಡ್‌ತೇಳಿರೆ ಸತ್ತ್ ಬುಟ್ಟದೆ.

608. ದುಡ್ಡ್ ಇದ್ದವನೇ ದೊಡ್ಡಪ್ಪ.

609. ದೂರದ ನೀರ್ ಬಾಯಾರಿಕೆಗೆ ಆಕಿಲೆ.

610. ದೂರದ ಬೆಟ್ಟ ಕಣ್ಣಿಗೆ ನುಣ್ಣಂಗೆ

611. ದೇವುರು ಇದರ್ನೇ ದೆವಕ್ಕೆ ಅನ್ನ.
612. ದೇವುರಿಗೆ ಎಡೆ ಇಕ್ಕುದು, ಕಡೆಗೆ ನಾವೆ ಎಳ್ದ್ ತಿಂಬದು.
613. ದೇವುರಿಗೆ ಎಡೆ ಇಕ್ಕ್‌ಕನ ಕ್ರಮ ಹೆಚ್ಚ್,
ದೆವ್ವಕ್ಕೆ ಎಡೆ ಇಕ್ಕ್‌ಕನ ಜಗಳ ಜಾಸ್ತಿ.
614. ದೇಶಾಂತರ ಹೋದರೂ ಸ್ವಾತಂತ್ರ ಇರೊಕು.
615. ದೇವುರು ಕೊಟ್ಟರೂ ಪೂಜಾರಿ ಕೊಡ್ದುಲೆ.
616. ದೇಶ ತಿರ್ಗ್ಗೊಕು ಕೋಶ ಓದಕೂ.
617. ದೇವುರು ದೇವುರುತ ದೇವುರ ಕಡೆ ನೋಡ್ರೆ
ಆಡ್ ತಲೆ ನಾಯಿ ಹೋತ್ತ್ ಕಂಡ್ ಹೋದೆ.
618. ದೇಹಕ್ಕೆ ಮುಪ್ಪು ಬಂದರೂ ಆಸೆಗೆ ಬಾಕಿಲೆ.
619. ದೇವುರಂದ ದೆವ್ವಕ್ಕೆ ಅನ್ನ.
620. ದೇವುರಿಗೆತ ಎಡೆ ಇಕ್ಕುದು ಕಡೆಗೆ ನಾವೇ ಮುಕ್ಕುದು.
621. ದೊಡ್ಡ ಮನೆ ಮುರ್ದು ಸಣ್ಣ ಮನೆ ಕಟ್ಟಿದೋ.
622. ದೊರೆಗೆ ಕುರ ಎದ್ದ್ ಊರು ಮದ್ದೆಲ್ಲಾ ಮಾಡ್ದೋ,
ಕುಂಬಾರಂಗೆ ಕುರ ಎದ್ದರೆ ಮಡಿಕೆಗೊಂದು ಏಟ್ ಕುರಕೊಂದು ಏಟ್.
623. ದೊರೆ ನಂಬಿ ಕೆಟ್ಟರೂ, ಧರೆ ನಂಬಿ ಕೆಡಿಕ್ಕಿಲೇ.
624. ದೊಣ್ಣೆ ಹಿಂಡಿರೆ ಎಣ್ಣೆ ಬಾದುಲೆ.
625. ದೊಡ್ಡವು ಗತಿ ಇಲ್ಲೆತ ಗಂಜಿ ಕುಡ್ದರೂ ಪಥ್ಯ ತೇಳುವೆ.
626. ದೊಣ್ಣೆಲಿ ಹೋಡಿಯೋದು ಎಣ್ಣೆಲಿ ಪೂಜುದು.
627. ಧರ್ಮ ಸಂಕಟ.
628. ನರಿ ಸಾಯಕಾದ ಹುಲಿನ ತಿಕ ಮೂಸಿ ನೋಡ್ತ್.
629. ನಡ್ದದ್ ಭಾರತ ಬರ್ದದ್ ರಾಮಾಯಣ.
630. ನಡಿಯುವವರೆಗೆ ನಾಣ್ಯ, ಇರುವರೆಗೆ ಮಾನ.
631. ನಮ್ಮ ಊರುಲಿ ಹೂಂಜ, ಬೇರೆ ಊರುಲಿ ಹೆಂಟೆ.

632. ನವರಾತ್ರಿಲಿ ಶಿವರಾತ್ರಿನಾ.
633. ನರಿ ಬುದ್ಧಿ ಹೇಳಿಕೆ ಬಾಕನ, ಕೋಳಿ ಮ್ಯಾಲೆ ಕಣ್ಣ್ ಇರೊಕು.
634. ನಂದ್ ಹೆಸೆರ್ ಅವಂದ್ ಬಸ್‌ರ್.
635. ನಂಗೆ ಗತಿ ಇಲ್ಲೆ ಅವಂಗೆ ಮತಿ ಇಲ್ಲೆ.
636. ನಂದ ರಾಜನ ದುಡ್ಡು ನರಿ ನಾಯಿ ಪಾಲಾತ್.
637. ನಂಟತನ ಹೆಚ್ಚಾದಂಗೆ ಬಂಡಾಟ ಜಾಸ್ತಿ.
638. ನಾಯಿ ಮೊಲೆಲಿ ಹಾಲ್ ಇದ್ದರೆ, ದೇವುರಿಗಾದುಲೆ ದೆವ್ವಕ್ಕಾದುಲೆ.
639. ನಾಯಿನ ಹಾಸಿಗೆಗೆ ಹಾಕಿರೆ, ಹೇಲ್ ಕಾಂಬಕನ ನೆಗ್ದ್ ಬಿದ್ದದೆ.
640. ನಾಯಿ ಬೊಗುಳಿರೆ ದೇವಸ್ಥಾನ ಹಾಳಾದುಲೆ.
641. ನಾಯಿ ಹುಣ್ಣಿಗೆ ಬೂದಿ ಮದ್ದ್.
642. ನಾಯಿ ಹೆತ್ತ್ ನಡು ನೀರಿಗೆ ಹಾಕಿದಂಗೆ.
643. ನಾಯಿ ಇರುವಲ್ಲೇ ಇರೋಕು.
644. ನಾಯಿ ಕಂಡರೆ ಬೊಗುಳ್ದೆ, ಮನ್ಸ ಕಾಣದಿದ್ದರೋ ಬೊಗುಳ್ದೆ.
645. ನಾಯಿ ತರ ಆಡಿಕಾಗದ್.
646. ನಾಯಿಗೂ ಅಂವಂಗೂ ಎನ್ ವ್ಯತ್ಯಾಸ ಇಲ್ಲೆ.
647. ನಾಯಿಗೆ ಹೇಳ್ಕನ, ನಾಯಿ ಬಾಲಕ್ಕೆ ಹೇಳ್ತ್.
648. ನಾಯಿ ಬಾಲ ಡೊಂಕುತ ಕೊಳ್ವೆ ಹಾಕಿದಂಗೆ.
649. ನಾಲಿಗೆ ಲಾಯಿಕ ಇದ್ದರೆ ನೆಂಟ್ರ್.
650. ನಾಲಿಗೆ ಹಾಳಾದರೆ ಹಲ್ಲಿಗೆ ಕೇಡ್.
651. ನಾಲಿಗೆ ನಮ್ಮ ಹಿಡ್ತಲಿ ಇರೋಕು.
652. ನಾಲಿಗೆ ಉದ್ದ ಮಾಡ್‌ಬಡ.
653. ನಾಲಿಗೆ ಬಿದ್ದ್ ಹೋತ್.
654. ನಾಲಿಗೆ ಉದ್ದ ಉಟ್ಟುತ ಹೆಚ್ಚ್ ಉದ್ದ ಎಳಿಬಡ.
655. ನಾಲಿಗೆ ಹೆಂಗೆ ಬೇಕರೂ ತಿರ್‌ಗಿದೆ.

656. ನಾಲಿಗೆಗೆ ಮೂಳೆ ಇಲ್ಲೆ.
657. ನಾಲಿಗೆ ಸಮ್ಮನಿದ್ದರೆ ಹಲ್ಲ್ ಉಳ್ದದೆ.
658. ನಾಲಿಗೆ ಕೆಟ್ಟ್ ಕೆರ ಆತ್.
659. ನಾಲಿಗೆ ಇಲ್ಲೆ.
660. ನಾರುವ ಬಾಯಿಗೆ ಸುಗಂಧ ಬೇರೆ ಕೇಡ್.
661. ನಾಳೆ ತೇಳುವವನ ಮನೆ ಹಾಳ್.
662. ನಾಳೆ ತೇಳ್ದ ಕೆಲ್ಸನ ಇಂದೇ ಮಾಡ್.
663. ನಾನ್ ಮಾಡ್ದೆ ಸರಿ ತೇಳಿರೆ ಎಲ್ಲಾ ಹಾಳ್.
664. ನಾನ್ ಹೊಡ್ದಂಗೆ ಮಾಡ್ನೆ, ನೀ ಮರ್ಟಂಗೆ ಮಾಡ್.
665. ನಾಚಿಕೆ ಇಲ್ಲದವುಳಿಗೆ ನಾಲ್ಕಡಿ ಬಾಗ್‌ಲ್.
666. ನಾಡಿಗೆ ಇಬ್ಬರು ರಾಜರಿದ್ದರೆ ಕೇಡ್ ತಪ್ಪಿಕ್ಕಿಲ್ಲೆ.
667. ನಾನೆ ಎದ್ದ್ ಬೊಗುಳೊಕುತಾದರೆ, ನಾಯಿ ಯಾಕೆ ಸಾಕುದು.
668. ನಾಯಾದರೂ ಅವ್ವನೆ, ನೀರಾದರು ಮಜ್ಜಿಗೆನೆ.
669. ನಾಯಿ ಮುಟ್ಟಿದ ಮಡಿಕೆನ, ನಾಯಿ ಕುತ್ತಿಗೆಗೆ ಕಟ್ಟಿ.
670. ನಾಯಿ ಹೇಲ್ ಮೂರು ತುಂಡ್.
671. ನಾಲಿಗೆ ಒಂದಾ? ಎರಡಾ?
672. ನಾಲಿಗೆ ನೆಟ್ಟಂಗೆ ಇದ್ದರೆ ನಾಡೆಲ್ಲಾ ನೆಂಟ್ರ್.
673. ನಾಲಿಗೆಗೆ ಮುಳ್ಳು ಚುಚ್ಚಿ ಅಟ್ಟಲಿ ಕೂರ್ಸಿರೂ,
ಮಳೆಗಾಲ ಬಾಕನ ಎಲ್ಲಿ ಒಳರಿ ತೆಳ್ದಂಗೆ.
674. ನಾಳೆನ ಮಾತ ನಾರಾಯಣಂಗೆ ಗೊತ್ತು.
675. ನ್ಯಾಯ ಕೇಳಿಕೆ ಹೋಗಿ ನಾಯಿ ಪಾಡಾತ್.
676. ನಿದ್ರೆ ದೇವಿಗೆ ನಿಯತ್ ಉಟ್ಟು ಲಕ್ಷ್ಮಿದೇವಿ ಹಾದರಗಿತ್ತಿ.
677. ನಿದ್ದೆ ಗೆಟ್ಟೋ ಬುದ್ಧಿ ಗೆಟ್ಟೋ.
678. ನಿದ್ದೆ ಕೆಟ್ಟವಂಗೆ ಮದುವೆ ಇಲ್ಲೆ.

679. ನೀ ತೇಳ್ದರೆ ನಿನ್ನ ಅಪ್ಪ ತೇಳ್ದ್.
680. ನೀನೂ ಬೇಡ ನಿನ್ನ ಸವಾಸನೂ ಬೇಡ.
681. ನೀರ್ ಮೇಲೆ ಹೋಮ ಹಾಕಿದಂಗೆ.
682. ನಿದ್ದೆ ಕೆಟ್ಟವಂಗೆ ಬುದ್ದಿಕೇಡ್.
683. ನಿನ್ನಂತ ಪತಿವೃತೆ ಇಲ್ಲೆ ತೇಕನ ಗಂಡನ ಅಪ್ಪತೇಳ್ತ್.
684. ನಿಯತ್ತಂದ ಬದ್‌ಕಕೂ, ಇಲ್ಲದಿದ್ದರೆ ಸಾಯೋಕು
685. ನಿಲ್ಲಿಕೆ ನೆಲೆ ಇಲ್ಲೆ, ಹಿಡಿಯಕೆ ಕೊಂಬೆ ಇಲ್ಲೆ.
686. ನಿನ್ನ ನೋಡಿ ಗಡಿಗೆ ಎತ್ತಿ ಹಾಕಿದೆ, ಅವ್ವ ಬೊಯಿದೆ ಕಾಸ್ ಕೊಡು.
687. ನಿನ್ನ ಹತ್ರ ತಲೆ ಮ್ಯಾಲೆ ಅಕ್ಕಿ ಕಾಳ್ ಹಾಕ್ಸಿ ಕಂಬೂದಿಕಿಂತ
ಬಾಯಿಗೆ ಹಾಕ್ಸಿ ಕಂಬೂದು ಒಳ್ಳದ್.
688. ನಿಲ್ಲಿಕೆ ನೆರಳ್ ಇಲ್ಲೆ, ಹಿಡಿಯಕೆ ಕೊಂಬೆ ಇಲ್ಲೆ.
689. ನಿಂತದ್ದ್ ನೆಲದ ಮೇಲೆ, ಮಾತ್ ಕುದುರೆಲೆ ಕುದ್ದವನಂಗೆ.
690. ನೀರ್ ತಕಬಾತ ಕಳ್ಸಿರೆ, ಹೊರ್ಸಿಕೆ ಜನ ಇಲ್ಲೆತಾ ಹಂಗೆ ಬಾತ್.
691. ನೀಚಂಗೆ ಉಪಕಾರ ಮಾಡಿಕಾಗದ್.
692. ನೀತಿ ಹೇಳ್ದ್, ನೋತ್‌ಕಂಡೆ ಉಚ್ಚೆ ಹೊಯ್ದ್.
693. ನೀನ್ ತಂದ್ ಹಾಕ್, ನಾನ್ ತಿಂದ್ ಹಾಕಿನೆ.
694. ನೀರ್‌ಲ್ಲಿ ಮುಳಿಗ್ಗಿರೂ ಎಮ್ಮಗೆ ಕ್ರಾಯ ಕಟ್ಟಿಂದಂಗೆ.
695. ನೀರ್ ಆದ ಮಡಿಕೆ ಕೆಟ್ಟದೆ, ಎಣ್ಣೆ ಆದ ಮಡಿಕೆ ಕೆಡ್ದುಲೆ.
696. ನೀಡ್ದ ಕೈಗೆ ನೆರವಾಕು.
697. ನೀರ್‌ಲೀ ವಾಸ, ಮೊಸಳೆ ಒಟ್ಟಿಗೆ ದ್ವೇಷ.
698. ನೀರ್ ಕಡ್ದರೆ ಬೆಣ್ಣೆ ಬಾದುಲೆ.
699. ನುಂಗಿದ ತುತ್ತ್‌ದ್ ರುಚಿ ಕೆಳ್ದಂಗೆ.
700. ನುಲುವ ಹೆಣ್ಣ್‌ನ ಬುಟ್ಟು, ಹೇಲುವ ಹೆಣ್ಣ್‌ನ ತಾತ್.
701. ನುಂಗಿದ ಮೇಲೆ ಉಗ್ಗಿಯಕೆ ಆದುಲೆ.

702. ನೂರು ಜುಟ್ಟು ಹೊಂದಿಕಂಡ್ ಇದ್ದವೆ, ಮೂರು ಜಡೆ ಹೊಂದಿಕಂಬದುಲೆ.

703. ನೂಲು ತುಂಡಾಗಿರ್ದು ಬಾಳ್ ತುಂಡಾತ್‌ಲೆ.

704. ನೂಲು ಇದ್ದಂಗೆ ಬಟ್ಟೆ.

705. ನೂರು ಹೆತ್ತವುಳಿಗೆ ಮೂರು ಹೆತ್ತವುಳು ಹೆಳ್ಗ್‌ಗಡ.

706. ನೆನ್ನೆ ಸತ್ತ ಅತ್ತಗೆ ಇಂದ್ ಅತ್ತ ಸೊಸೆ.

707. ನೆರೆ ಮನೆ ದೋಸೆಗೆ, ಕಾಯಿ ಹಾಲ್ ಮಾಡಿ ಕಾದಂಗೆ.

708. ನೆರೆ ಮನೆ ದೋಸೆ ತೂತ, ನಮ್ಮ ಮನೆ ಕಾವುಲಿ ತೂತ.

709. ನೆರೆ ಮನೆ ಹಾಳಾದರೆ ಕರ್ ಕಟ್ಟಿಕೆ ಆತ್.

710. ನೆಲ್ಲಿಕಾಯಿ ತಿಂದ್ ನೀರ್ ಕುಡ್ದದ್‌ಕೆ, ಮಲ್ಲಿಗೆ ಬಾತ್ ಚಳಿಜ್ವರ.

711. ನೆಲ್ಲಿ ಮರಕ್ಕೆ ದೊಣ್ಣೆ ಬೀಸಿದಂಗೆ.

712. ನೆಗಡಿ ಆತ್‌ತಾ ಮೂಗು ಕೂಯ್ಯಕಾದುಲೆ.

713. ನೆಂಟ್ರಿಗೆ ಹಿಟ್ಟ್ ಹಾಕಿತ್‌ಲೆ, ನಾಯಿ ಸಾಕಿತ್‌ಲ್.

714. ನೆಂಟ ಬಾಕನ ಬದನೆ ಗಿಡ ನಟ್ಟಂಗೆ.

715. ನೆಂಟ್ರ್ ದೂರ ಇರೋಕು, ನೀರ್ ಹತ್ರ ಇರೋಕು.

716. ನೇಯುವವನ ತಿಕ ಖಾಲಿ, ಗೆಯ್ಯುವವನ ಹೊಟ್ಟೆ ಖಾಲಿ.

717. ನೋಡಿ ತಿಳಿಯೋಕು ಮಾಡಿ ಕಲಿಯೋಕು.

718. ನೋಡಿಕೆ ಮಳ್ಳಿ ಕೆಲ್ಸಕೆ ಕಳ್ಳಿ.

719. ನೋಡ್ತಾ ನೋಡ್ತಾ, ಮನೆ ಹೆಣ್ಣ್ ಮಾರಿ ಆತ್.

720. ಪಗಡೆ ಆಡಿ ಪಾಂಡವು ಕೆಟ್ಟೋ.

721. ಪಟ್ಟಣ ಆಳುವ ಅಪ್ಪಗಿಂತ, ಭತ್ತ ಕುಟ್ಟುವ ಅವ್ವನೆ ಮೇಲ್.

722. ಪಟ್ಟ ಪಾಡೆಲ್ಲಾ ನಾಯಿಪಾಡ್ ಆಗಿ ಹೋತ್.

723. ಪಟ್ಟೆ ಸೀರೆ ಉಟ್ಟರೂ, ಹೊಟ್ಟೆ ಹೊರೆದೂ ತಪ್ಪಿಕಿಲ್ಲೆ.

724. ಪಡವಲಕಾಯಿ ಡೊಂಕಾದರೆ ಉದುಕ ಡೊಂಕಾ.

725. ಪರ ಊರು ತೇಳ್ದ ಮೇಲೆ ಪರ್ದಾಟನೇ.

726. ಪಾಪಿ ಹೋದೆಲೆಲಾ ಪಾತಾಳ.
727. ಪಾಡೂ ಬೇಡ ಪಾಯಸನೂ ಬೇಡ.
728. ಪಾದ ಹಿಡ್ದರೂ ನಾಗರ ಹಾವು ಬುಡಿಕಿಲೆ.
729. ಪಾಪ ಇರುವಲ್ಲಿ ಪಾತಲ, ನೀರ್ ಇರುವಲ್ಲಿ ಕೆಸ್‌ರ್.
730. ಪಾಪಕ್ಕೆ ಹೆಣ್ಣ್ ಪುಣ್ಯಕ್ಕೆ ಅವ್ವ.
731. ಪಾಪದವುಕ್ಕೆ ಜಾರ್ಬಂಡೆ, ಪುಣ್ಯದವುಕೆ ಎರ್ಬಂಡೆ.
732. ಪಾಪಿ ಸೊತ್ತು ಪರರ ಪಾಲ್.
733. ಪಿತ್ತ ಕೆದ್ರಿ ನೆತ್ತಿಗೇರ್ತ್.
734. ಪೀಡೆ ತೊಲ್ಗಿದಂಗೆ ಆತ್.
735. ಪುಗುಸಟ್ಟೆ ಗಂಡ ಹೊಟ್ಟೆ ತುಂಬಾ ಉಂಡತ್.
736. ಪೋಲಿ ದನಕ್ಕೆ ಹಾಲ್ ಹೆಚ್ಚಿಗೆ, ಕೂಲಿ ಮಾಡವವುಕೆ ನಾಲಿಗೆ ಹೆಚ್ಚಿಗೆ.
737. ಪೋಲಿ ಮುಂಡೆಗೆ ತಾಳಿಕಟ್ಟಿರೆ, ಪೋಲಿ ಪೋಲಿನೆ ತಾಳಿ ತಾಳಿನೆ.
738. ಫಲ ಕೊಟ್ಟ್ ಪಾಪ ಕಳಿ
739. ಬಗ್ಗಿದವನ ಬೆನ್ನಿಗೆ ಗುದ್ದ್ ಜಾಸ್ತಿ.
740. ಬಗ್ಗಿದವನ ಸಾಮಾನ್ ಕದ್ದದೆ.
741. ಬಗ್ಗಿ ಗದ್ದೆ ಹೊಡ್ದರೆ ಕಂದಾಯ ಕಟ್ಟುದು ತಪ್ಪಿದ್ಯಾ.
742. ಬಡಗನ ಬಾಯಿ ಹಾಳ್, ಕೊಡಗನ ಕೈ ಹಾಳ್.
743. ಬದಿಕಿರೆ ಭಿಕ್ಷೆ ಬೇಡಿ ತಿನ್ನಕ್.
744. ಬಸುರಿಲಿ ಗೈದುಣ್ಣು, ಬಾಣಂತಿಲಿ ಕುದ್ದುಣ್ಣು.
745. ಬಳ್ಳಿಗೆ ಕಾಯಿ ಬಾರನಾ?
746. ಬಡವನ ಮನೆ ಊಟ ಲಾಯಿಕ, ಸಿರಿವಂತನ ಮನೆ ಮಾತ್ ಲಾಯಿಕ.
747. ಬಡಾಯಿಗಿಸ್ಟ್ ಮಣ್ಣ್ ಹಾಕಿತ್.
748. ಬಯ್ದೋಳು ಬಾತ್‌ಲೆ, ಕೇಳ್ದವುಳು ಗುಂಡ್‌ಕಲ್ಲಾತ್.
749. ಬಯ್ಯೋವು ಬದಕ್ ಹೇಳುವೆ, ಹೊಗಳೋವು ಕೆಡ್‌ಕ್ ಹೇಳುವೆ.

750. ಬಯ್ಯೋವು ಬದುಕಿಸುವೆ, ಬೆನ್ನ್‌ತಟ್ಟವು ಸಾಯಿಸುವೆ.

751. ಬಸುರಿ ಕೈಲಿ ತಲೆ ನೋಡಿಸಿಕಣಕು, ಬಾಣತಿ ಕೈಲಿ ನೀರ್‌ತರ್ಸೋಕು.

752. ಬಗ್ಗಿರೆ ತರಡ್ ಕತ್ರಿಸಿದೆ.

753. ಬಡ ಪಾಯಿ ದೇವುರ್ನ ಕಂಡರೆ, ಹೂವು ಹಾವಾಗಿ ಉಸ್ ತೇಳ್ತ್.

754. ಬಡವನ ಮನೆ ಸುಣ್ಣ ಬಾಯಿ ಬುಟ್ಟ್‌ಕಂಡ್ ಇದ್ದದೆ.

755. ಬಡಾಯಿಗೊಂದು ಕಡಾಯಿ ತಾತ್, ಕಡಾಯಿ ಬಂದ್ ಜಗಳ ಮಾಡ್ತ್.

756. ಬಡಕಲ್ ಎತ್ತ್ ಬಾಡಿಗೆ ಗಾತ್, ಬೀಜದ ಬಿತ್ತ್ ಊಟಕ್ಕಾತ್.

757. ಬದ್‌ಕಿದ್ದ ಮನೆಲಿ ತಡ್‌ಕೀರೆ ಸಿಕ್ಕಿದೆ.

758. ಬಲ ಇಲ್ಲದಂವ ನೆಲದೂರಿ ಏನ್ ಫಲ.

759. ಬಲ್ಲವುಕೆ ಗೊತ್ತು ಬೆಲ್ಲದ ರುಚಿ.

760. ಬಂಟನ ತಿಕಕ್ಕೆ ಬಲಗೈ ಹಾಕಿ, ನೆಂಟನ ತಿಕಕ್ಕೆ ನಾಲಿಗೆ ಹಾಕಿತ್.

761. ಬಾಯಿ ಬೊಂಬಾಯಿ.

762. ಬಾಕನ ಬೆತ್ತಲೆ ಹೋಕನ ಕತ್ತಲೆ.

763. ಬಾಯಿಗೆ ಬೆಣ್ಣೆ ಹಾಕಿರೆ ಕರುಗುದುಲೆ.

764. ಬಾಯಿ ಲಾಯಿಕ ಇದ್ದರೆ, ಯಾರು ಬೇಕಾರೂ ಅದವೆ.

765. ಬಾಯಿ ಇದ್ದಂವ ಬದ್‌ಕಿದೆ.

766. ಬಾಯಿ ಆರ್‌ಕನ ಬಾವಿ ತೆಗೆಕೆ ಹೋದಂಗೆ.

767. ಬಾಯಿ ಒಳಗೆ ನೊಣ ಹೊಕ್ಕಿದೆ.

768. ಬಾಯಿಲೆ ಮಾತ್ರ ಬಡಾಯಿ, ಕೈಲೆ ಹರಿಯಕಾದುಲೆ.

769. ಬಾಳೆಗೊಂದು ಗೊನೆ ಇರೋಕು, ಬದ್‌ಕಿಗೊಂದು ಗುರಿ ಇರೋಕು.

770. ಬಾಳುವ ಮನೆಗೊಂದು, ಬೊಗುಳುವ ನಾಯಿ.

771. ಬಾಳ್ದು ಬದುಕುದು ಅವರಿಷ್ಟ.

772. ಬಾಳುವವನ ಬದುಕುವವನ ನೋಡ್ರೆ ಗೋತ್ತಾದೆ.

773. ಬಾಯಿಲೆ ಬೆರ್ಳ್ ಹಾಕಿರೆ ಕಚ್ಚಿಕೆ ಗೊತ್ತುಲೆ.

774. ಬಾಯಿಲಿ ಬೆಣ್ಣೆ ಕಂಕುಳ್‌ಲಿ ದೊಣ್ಣೆ.
775. ಬಾಯಿ ಬುಟ್ರೆ ಬಣ್ಣಗೇಡ್.
776. ಬಾಳಿಕಾಗದಂವ ಬಾವಿಗೆ ಬೀತ್.
777. ಬಾಗ್‌ಲ್ ಹತ್ರ ನಿಲ್ಲ್ ಬಡ, ಮಲ ಮಕ್ಕಳ ಎಡ ನಿಲ್ಲ್ ಬಡ.
778. ಬಾಯಿಲಿ ದೇವುರ ನಾಮ, ಮನ್ಸ್‌ಲಿ ದೆವ್ವದ ಕಾಟ.
779. ಬಾಯಿ ಬುಟ್ಟರೆ ಬಣ್ಣಗೇಡ್.
780. ಬಾಳಿಕೆ ಬಾರದವ್ಳು ಬಾವಿಗೆ ಬೀತ್.
781. ಬಾಳೆ ಎಲೆಗೆ ಬೆಣ್ಣೆ ಹಾಕಿಕಾಗದ್, ಮುತ್ತುಗದ ಎಲೆಗೆ ಸುಣ್ಣ ಹಾಕಿಕಾಗದ್.
782. ಬಾಳಿ ಬದುಕುವ ಮನೆ ಹಾಳಾಗಿ ಹೋತ್.
783. ಬಾಳ್ದ್ ಬದುಕುದು ಅವುಕೆ ಬುಟ್ಟದ್
784. ಬಾಳೊಕು ಬದುಕೊಕುತಾ ಗ್ಯಾನ ಬೇಕು.
785. ಬೆತ್ತಲೆ ಇರುವ ಊರುಲಿ ಬಟ್ಟೆ ಹಾಕಿದವೆ ಹುಚ್ಚರ್.
786. ಬಿದ್ದರೂ ಮೀಸೆ ಮಣ್ಣು ಆಕಿಲೆ.
787. ಬಿಕ್ಕಿ ಬಿಕ್ಕಿ ಮರ್ಟರೆ ಬೀಸುವ ಕಲ್ಲ್ ತಿರ್‌ಗಿದ್ಯಾ.
788. ಬಿಸಿ ಇದ್ದರೆ ಬೆಣ್ಣೆ ಕರ್ಗಿದೆ.
789. ಬಿಕ್ಕಳ್ಸಿದ್ದ್ ಬೆಳ್ಳಿಗ್ಗೆ ಆದರೆ ಆಕಳ್ಸ್‌ದು ಯಾಗ?
790. ಬಿಟ್ಟಿ ಸಿಕ್ಕಿತ್ ಬಿಕನಾಸಿ ಆತ್.
791. ಬಿತ್ತಿರೆ ಕುಯ್ಯಕ್, ಮಾಡ್ರೆ ಉಣ್ಣ್‌ಕ್.
792. ಬಿಳಿ ಕುದುರೆ ಮೇಲೆ ಕೈ ಸದಾ ಇರೋಕು,
ಹೆರದ ಹೆಣ್ಣ್ ಮೇಲೆ ಸದಾ ಕಣ್ಣ್ ಇರೋಕು.
793. ಬೀಸುವ ದೊಣ್ಣೆಂದ ತಪ್ಪಿಸಿಕಂಡರೆ, ನೂರು ವರ್ಷ ಆಯಸ್ಸ್
794. ಬೀಳುವ ಮರಕ್ಕೆ ಕೊಡ್ಲಿ ಹಾಕಿತ್.
795. ಬುಡ ಗಟ್ಟಿ ಇದ್ದರೆ ಕೊಡಿ ನಿಲ್ಲುದು.
796. ಬುಟ್ಟ್‌ಕಂಡ್ ಮೇಯುವ ದನನ ಕಟ್ಟಿ ಹಾಕಿರೆ ನಿತ್ತದ್ಯಾ?

797. ಬುಡ ಸರಿ ಇದ್ದರೆ ಕೊಂಬೆ ಸರಿಯಾಗಿರ್ದು.
798. ಬುದ್ಧಿ ಇಲ್ಲದಂವ ಬೂದಿ ಗುಂಡಿಲಿ ಹೇಲಿಕೆ ಕುದ್ದರೆ ಜಾಣನೂ ಬಾತ್.
799. ಬುದ್ಧಿ ಭೂಮಿ ಮಾಡ್ ತೇಳ್ದ್, ಅದೃಷ್ಟ ಕತ್ತೆ ಕಾಯಿ ತೇಳ್ದ್.
800. ಬುಡಕ್ಕೆ ಕೊಡಲಿ ಕಾವಾತ್.
801. ಬುದ್ಧಿ ಗದ್ದೆ ಹೋಡು ತೇಳ್ದ್, ಅದೃಷ್ಟ ಕತ್ತೆ ಕಾಯಿ ತೇಳ್ದ್.
802. ಬುದ್ಧಿ ಮಾತ್ ಹೆಳ್ದಕ್ಕೆ, ಗುದ್ದಿಕಂಡ್ ಸತ್ತತ್.
803. ಬುರಡೆಗಿಂತ ತರಡೆ ದಪ್ಪ.
804. ಬುರುಡೆ ಗಟ್ಟಿ ಉಟ್ಟುತ್ತಾ ಬಂಡೆಗೆ ಗುದ್ದಿತ್
805. ಬೂದಿ ಮುಚ್ಚಿದ ಕೆಂಡದಂಗೆ.
806. ಬೆಟ್ಟಕ್ಕೆ ಬಟ್ಟೆ ಹಾಸಿಕೆ ಆದೆನಾ?
807. ಬೆಟ್ಟದಷ್ಟೇ ಆಸೆ ಉಟ್ಟು.
808. ಬೆಟ್ಟದ ಮೇಲೆ ಇರುವ ದೇವುರಿಗೆ, ಬೆಟ್ಟದಷ್ಟು ದೂಪ ಹಾಕಿಕೆ ಅದುಲೆ.
809. ಬೆಟ್ಟದ ದೇವುರಿಗೆ ಹರಿಕೆ ಹೊತ್ತತ್, ನಡಿಯಕೆ ಸಂಕಟ.
810. ಬೆದೆ ಹಾವುನ ಹತ್ರ ಹೋಕಾಗದ್.
811. ಬೆವುರು ಸುರ್ಸಿರೆ ಬಾಳ್ ಬಂಗಾರ.
812. ಬೆಳಕ್ ಹರಿಯುವವರೆಗೆ ಮಲ್ಗಿರೆ, ಬದಕ್ ಹರ್ದ್ ಹೋದೆ.
813. ಬೆಳ್ಳಂಬೆಳಿಗೆ ಕಷ್ಟ ಪಟ್ಟ್ ಹೆತ್ತ ಮಂಜನ
ಬೆಳ್ಕ್ ಹರ್ದಂಗೆ ಹಾಳ್ ನಾಯಿ ಹೊತ್ಕಂಡ್ ಹೊತ್.
814. ಬೆಕ್ಕಿಗೆ ಆಟ, ಇಲಿಗೆ ಪ್ರಾಣ ಸಂಕಟ.
815. ಬೇರಳ್ ಕೊಟ್ಟರೆ ಕೈ ನುಂಗಿದೆ.
816. ಬೆಳ್ಳಂಗಿದ್ದದ್ದೆಲ್ಲಾ ಹಾಲಲ್ಲ, ಕಪ್ಪು ಇರ್ದೆಲ್ಲಾ ಕಸ್ತೂರಿ ಅಲ್ಲಾ,
817. ಬೆಟ್ಟದ ಮೇಲೆ ಇರವುಕ್ಕೆ ಕಂಡದೆ, ಅಟ್ಟದ ಮೇಲೆ ಇರವುಕ್ಕೆ ಕಾಂಬೊದುಲೆ
818. ಬೆಪ್ಪ ಹೆಂಗೆ ಸತ್ತ್‌ತ್ ತೇಳಿರೆ, ಹಾಂತೆ ಕಚ್ಚಿ ಸತ್ತ್‌ತ್.
819. ಬೇಡವಂಗೆ ಬರಗಾಲದ ಗ್ಯಾನ ಇಲ್ಲೆ.

820. ಬೇಕಾದ ಮಾತ್ ಬೆಲ್ಲಕಿಂತ ಸಿಹಿ.

821. ಬೇಡಿ ತಿನ್ನೊಕು ಕಾಡಿ ತಿಂಬಕಾಗದ್.

822. ಬೊಗುಳುವ ನಾಯಿಗೆ ಹೊಡೆಬಡ,
ಬಜಾರಿ ಹೆಣ್ಣ್‌ನ ಬಾಯಿಗೆ ಕೈ ಹಾಕ್ಬಡ.

823. ಬೊಗುಳುತ್ತಾ ಬೊಗುಳುತ್ತಾ ರಾಗ, ಉಗಿತ್ತಾ ಉಗಿತ್ತಾ ರೋಗ.

824. ಬೊಗುಳುವ ನಾಯಿ ಕಚ್ಚುದುಲೆ, ಕಚ್ಚುವ ನಾಯಿ ಬೊಗುಳ್ದುಲೆ.

825. ಭರಣಿ ಮಳೆ ಹೊಡ್ದರೆ ಎಲ್ಲಾ ಬೆಳೆ.

826. ಭಂಗಿ ಕುಡ್ದಂವನ ಭಂಗ ನೋಡು.

827. ಭಂಡ ಬದ್‌ಕಿತ್ ಹಟಮಾರಿ ಕೆಟ್ಟಿತ್.

828. ಭಂಡ ಕೆಟ್ಟ್‌ಕಂಡ್ ಬದ್‌ಕಿಗಾದ್.

829. ಭಂಡ ಬಡಾಯಿ ಕೊಚ್ಚಿತ್.

830. ಭಂಡ ಕೆಟ್ಟವನಂಗೆ ಆಡ್ದೆ.

831. ಭಾರ ಹೊತ್ತ್‌ಕಂಡ್ ಬಾ ತೇಕನ, ಗುಂಡುಕಲ್ಸ್ ಹೊತ್ತ್‌ಕ ಬಾತ್.

832. ಭಿಕ್ಷೆ ಬೇಡುವವಂಗೆ ಕೇಡ್ ಕಾಲತ ಇಲ್ಲೆ.

833. ಭಿಕ್ಷೆ ಬೇಡಿ ತಿಂಬೊದ್‌ಕ್ಕಿಂತ ಹೋಗಿ ಸಾಯಕೇನ್.

834. ಭೂಮಿ ತಾಯಿ ಬಂಜೆನಾ?

835. ಮಕ್ಕಳ ಮಾತ್ ಕೇಳಿ ಒಕ್ಕುಲು ಹೋದೊ.

836. ಮಕ್ಕ ಆದರೆ ಕೆಡಿಕಿಲ್ಲೆ, ಮಳೆ ಹೊಯ್ದರೆ ಕೇಡ್ ಇಲ್ಲೆ.

837. ಮಕ್ಕಳ ಕರ್ಕಂಡ್ ಮದುವೆಗೆ ಹೋಕಾಗದ್,
ಹೆಣ್ಣುನ ಕರ್ಕಂಡ್ ಜಾತ್ರೆಗೆ ಹೋಕಾಗದ್.

838. ಮಗಳ ಗಂಡ ಅಲ್ಲ ಅಳಿಯ ತೇಳ್ದಂಗೆ.

839. ಮನ್ಸಂಗೆ ಕಾಯಿಲೆ ಬರದೆ ಮರಕ್ಕೆ ಬಂದದೆನಾ?

840. ಮನ್ಸಾನಾ? ಅಂವ ಪ್ರಾಣಿನಾ.

841. ಮನೆ ದೀಪತಾ ಮುತ್ತುಕೊಟ್ಟರೆ ಸುಡದೆ ಇದ್ದದ್ಯಾ?

842. ಮನೆ ಸಣ್ಣದಾದರೂ ಮನ್ಸ್‌ದೊಡ್ಡದ್.

843. ಮನೆಗೆ ಮನ್ಸನೂ ಅಲ್ಲ, ಮಸಣಕ್ಕೆ ಹೆಣನೋ ಅಲ್ಲ.

844. ಮಲ್ಗಿದ ನಾಯಿನ ಕೆಣಕಿದಂಗೆ.

845. ಮಲ್ಗಿದ ಹಾವುನ ಮುಟ್ಟಿದಂಗೆ.

846. ಮಳ್ಳಿ ಮಳ್ಳಿ ಮಂಚಕ್ಕೆ ಕಾಲೆಷ್ಟು? ಮೂರು ಮತ್ತೊಂದು.

847. ಮಳೆ ಬುಟ್ರೂ ಮರದ ಹನಿ ಬಡ್ದುಲೆ.

848. ಮನೆಗೆ ಮಾರಿ ಊರಿಗೆ ಉಪಕಾರಿ.

849. ಮಕ್ಕಳಾಟಲಿ ಮಕ್ಕ ಅದಂಗೆ.

850. ಮಡಿಕೆ ಒಡಿಯಕೆ ದೊಣ್ಣೆ ಯಾಕೆ?

851. ಮನ್ಸ್‌ಲಿ ನೆನ್ಸಿಕೆ ಮನೆ ಆದರೇನ್? ಗುಡಿ ಆದರೆನ್?

852. ಮನೆಗೆ ಅಳಿಯ ಬಂದದಿಕ್ಕೂ,
ಕೋಳಿಗೆ ಕಾಯಿಲೆ ಆದದಿಕ್ಕೂ ಸರಿ ಆತ್.

853. ಮನೆಗೆ ಹೋದರೆ ಮಜ್ಜಿಗೆ ಕೊಡ್‌ದವುಳು,
ಹೇಳಿ ಕಳ್ಸಿರೆ ಮೊಸುರು ಕೊಟ್ಟದ್ಯಾ.

854. ಮನ್ಸ್‌ನ ರೋಗಕ್ಕೆ ಮದ್ದು ಇಲ್ಲೆ, ಕೇಡ್ ಕಾಲಕ್ಕೆ ಬುದ್ಧಿ ಇಲ್ಲೆ.

855. ಮಲ್ಗಿರುದ್ದಕ್ಕಿಂತ ಎದ್ದಿರ್ದೂ ಒಳ್ಳೆದ್, ಕುದ್ದಿರ್ದೂದ್ದಕ್ಕಿಂತ ಕೂಲಿ ಮಾಡ್ದು ಒಳ್ಳೆದ್.

856. ಮಲ್ಗಿರುವಂವನ ಎಳ್ಸಿ ಬೈಯಿಸಿ ಕಂಡಂಗೆ.

857. ಮಲ್ಗಿಕೆ ಜಾಗಕೊಟ್ರೆ ಮನೆ ಎಲ್ಲಾ ಉಚ್ಚೆ ಹೋಯ್ತ್.

858. ಮಳ್ಳಿನ ನಂಬಿರೂ ಕಳ್ಳಿನ ನಂಬಿಕಾಗದ್.

859. ಮಂತ್ರಿಂದ ಮನೆ ಹಾಳ್, ತಂತ್ರಿದ ಊರು ಹಾಳ್.

860. ಮರದ ನೆರಳ್‌ತಾ ಮರದಡಿಗೆ ಹೋದರೆ, ಮರ ಮುರ್ದ್ ಮೈ ಒರ್‍ಗಿತ್.

861. ಮಂಗನ ಕೈಗೆ ಮಾಣಿಕ್ಯ ಸಿಕ್ಕಿದಂಗೆ.

862. ಮದುವೆ ಆಗದ ಮಗಳ್ ಇದ್ದರೆ ಒಂದು ಕೈ ಮುರ್ದಂಗೆ.

863. ಮನ್ಸ್‌ನ ಗೆಲ್ಲಿಕೆ ಅಲಂಕಾರ ಬೇಡ, ದೇವುರ ಗೆಲ್ಲಿಕೆ ಪೂಜೆ ಬೇಕಿಲ್ಲೆ.

864. ಮದುವೆಂದ ಸುಳ್ಳ್ ಎರಡ್ ಪಟ್ಟ್, ಆದರೆ ಖರ್ಚ್ ನಾಲ್ಕ ಪಟ್ಟ್.

865. ಮಣಭಾರ ಹೊತ್ತವಂಗೆ ಹೆಣಭಾರನಾ?

866. ಮಾಡ್ದ್ ಉಣ್ಣು ಮಾರಾಯ.

867. ಮಾಡ್ದ ಪಾಪ ಎಷ್ಟೂ ಹರಿಕೆ ಹೊತ್ತರೂ ಹೋದುಲೆ.

868. ಮಾತ್ ಮನೆ ಕೆಡ್ಸಿತ್ ತೂತೂ ಒಲೆ ಕೆಡ್ಸಿತ್.

869. ಮಾತ್ ಆಡಿರೆ ಹೋತ್, ಮುತ್ತು ಒಡ್ಡರೆ ಹೋತ್.

870. ಮಕ್ಕಳ ನೆಪಲಿ ನಿದ್ದೆ, ಗಂಡನ ನೆಪಲಿ ಊಟ.

871. ಮಕ್ಕ ಇಲ್ಲದ ಮನೆ, ಒಕ್ಕುಲು ಇಲ್ಲದ ಮನೆನೂ ಒಂದೆ.

872. ಮಂಜ ಮಲ್ಗಿ ಕೆಟ್ಟತ್, ಮಗ್ಳ್ ತಿರ್‌ಗಿ ಕೆಟ್ಟತ್.

873. ಮಂಜನ ಮದುವೆ ಬಾಕನ ಬಾದೆ ಸುರಾತ್.

874. ಮಂಜನ ಸಂಗಾತ ಆಟ, ಅಳಿಯನ ಸಂಗಾತ ಊಟ.

875. ಮಗಳ್ ಒಳ್ಳವುಳು ಆದರೆ ನೆಂಟ್ರಸಾ ಒಳ್ಳವು.

876. ಮದುವೆ ಆದವಂಗೆ ಅದೇ ಇಲ್ಲೇ ತೇಳ್ದಂಗೆ.

877. ಮದುವೆಲಿ ಹರ್‌ಕ್ಲ್ ಬಟ್ಟೇ, ಹಬ್ಬಲಿ ತಿರುಪೆ ಹಿಟ್ಟೆ.

878. ಮನ್ಸಂಗೆ ಬಾರದೆ ಮರಕ್ಕೆ ಬಂದ್ಯಾ.

879. ಮನೆ ಮಗ್ಳ್‌ನ ಕೊಟ್ಟ್, ಅಳಿಯನ ಕಾಲ್ ಕಟ್ಟಿತ್.

880. ಮನೋ ರೋಗಕ್ಕೆ ಮದ್ದ್ ಇಲ್ಲೆ, ಕೇಡ್ ಕಾಲಕ್ಕೆ ಬುದ್ಧಿ ಇಲ್ಲೆ.

881. ಮನ್ಸನ ಕಾಯಿಲೆಗೆ ಮದ್ದ್ ಇಲೆ, ಕೇಡ್ ಕಾಲಕ್ಕೆ ಬುದ್ಧಿ ಇಲ್ಲೆ.

882. ಮಕ್ಕ ಮನೆ ಆಳ್‌ಕನ, ಅಪ್ಪಂಗ್ಯಾಕೆ ಎರಡ್ ಹೆಣ್ಣ್.

883. ಮಗಳ್ ಮುತ್ತೈದೆ ಅಳಿಯ ದಾಸಪ್ಪ.

884. ಮಣ್ಣು ಬುಟ್ಟರೆ ಮಡಿಕೆ ಇಲ್ಲೆ, ತನ್ನ ಬುಟ್ಟರೆ ದೇವುರು ಇಲ್ಲೆ.

885. ಮನೆಗೆ ಅಳಿಯ ಬಂದದಿಕ್ಕೂ,
ಕೋಳಿ ಸುಣ್ಣಸುಣ್ಣ ಹೇತದಿಕ್ಕೂ ಸರಿ ಹೋತ್.

886. ಮಳ್ಳಿ ಮನೆ ಮಕ್ಕಳ, ಕೊಳ್ಳಿ ಬೆಳ್ಕ್‌ಲಿ ಮಾಡ್ತಗಡ.

887. ಮಳೆ ಬುಟ್ರೂ ಮರದ ಹನಿ ನಿತ್ತತ್‌ಲೆ.
888. ಮಂಜ್ ಹಿಂದೆ ಮಳೆ, ಗಂಜಿ ಹಿಂದೆ ಅನ್ನ.
889. ಮಂದೆಲಿ ಹಸ್ ನೋಡ್ದ ಮೇಲೆ, ಮನೆಗೆ ಬಂದ್ ಕರ್ ನೋಡೋಕು.
890. ಮಾಗಿದ ಕಾಲಲಿ ಮಂಜನ ಮುದ್ದಾಡಿಕೆ ಪುರುಸೊತ್ತಿಲ್ಲೆ.
891. ಮಾಟ ಮಾಡ್ದವರ ಮನೆ ಹಾಳ್, ತೋಟ ಮಾಡದವರ ಬದ್ಕ್ ಹಾಳ್.
892. ಮಾಡಿಕಾದರೆ ಮಾಡ್ ಇಲ್ಲರೆ ಸುಮ್ಮನೆ ಕೂರು.
893. ಮಾಡುವ ಕೆಲ್ಸ ಬುಟ್ಟು ಆಡುವವನ ಒಟ್ಟಿಗೆ ಹೋತ್.
894. ಮಾಡುವವಂಗೆ ಮಡಿಕೆ ಚಿಂತೆ, ಮಾಡದವಂಗೆ ಕುಡಿಕೆ ಚಿಂತೆ.
895. ಮಾಡಿಕಾಗದ್ ಮಾಡಿ ಅದ್ ಹೆಂಗ್ಯಾತ್ ತೇಳ್ದಂಗೆ.
896. ಮಾತಿಗೆ ತಪ್ಪಿದಂವನೆ ಮಾದಿಗ.
897. ಮಾತ್ ಕಲ್ತವನ ಮನೆ ಹಾಳ್, ತೋಟ ಮಾಡದವನ ಬಾಳೆ ಹಾಳ್.
898. ಮಾತ್‌ಗಾರ ಮನೆಲಿ, ಕೆಲ್ಸಗಾರ ತೋಟಲಿ.
899. ಮಾತ್ ಮುತ್ತಿಗೂ ಮೂಲ, ಮಾತ್ ಕುತ್ತಿಗೂ ಮೂಲ.
900. ಮಾತಲೇ ಮನೆ ಕಟ್ಟಿತ್, ಮಾತ್‌ಲಿ ಮನೆ ಕೆಡ್ಸಿತ್.
901. ಮಾತ್‌ಗಾರ ಉಂಡ್ ಹೊಟ್ಟೆ ತುಂಬಿಸಿ ಕಂಡತ್.
902. ಮಾತ್‌ಲೆ ಹೊಟ್ಟೆ ತುಂಬಿತ್.
903. ಮಾತಾಡಿ ಮಾತಾಡಿ ಗೌಡ ಅವರೆ ಕಾಯಿ ಕೋಯ್ತ್.
904. ಮಾಡಿಕಾಗದ್ ಮಾಡಿರೆ ಆಕಾಗದ್ ಆದೆ.
905. ಮಾಡದ ಪಾಪ ಮಾಡಿ, ಕಾಶಿಗೆ ಹೋದರೂ ಹೋದುಲೆ.
906. ಮಾಡ್ದ ಪಾಪಕ್ಕೆ ಮನ್ಸೇ ಸಾಕ್ಷಿ, ತೆಗ್ದ ಬಾವಿಗೆ ಜಲನೇ ಸಾಕ್ಷಿ.
907. ಮಾಡೋಕು ಇಲ್ಲರೆ ಸುಮ್ಮನೆ ಕೂರೋಕು.
908. ಮಾನ ಹೋದ ಮ್ಯಾಲೆ ಪ್ರಾಣ ಇದ್ದ್ ಎನ್ ಫಲ.
909. ಮಾನ ಮರ್ಯಾದೆ ಎರಡೂ ಇಲ್ಲೆ.
910. ಮಾವ ಕೊಟ್ಟದ್ ಮನೆ ಮುಟ್ಟ, ಶಿವ ಕೊಟ್ಟದ್ ಸಾಯೋಗಂಟ.

911. ಮಾಡ್ದು ಬುಡ್ದು ನಮ್ಮ ಇಚ್ಛೆ, ಆದು ಹೋದು ದೇವುರ ಇಚ್ಛೆ.

912. ಮೀಸೆ ಹಣ್ಣಾದರೂ ಆಸೆ ಬುಟ್ಟಿತ್ತ್‌ಲೆ.

913. ಮೀಸೆ ಬಾಕನ ದೇಶ ಕಾಂಬಲೆ.

914. ಮೀಸೆ ಮಣ್ಣಾದರೂ ಹಿಡ್ದ ಹಟ ಬುಡ್ದುಲೆ.

915. ಮೂರ್ತಿ ಸಣ್ಣದಾದರೂ ಕೀರ್ತಿ ದೊಡ್ಡದ್.

916. ಮಿಣ್ಕಂಗೆ ಸರಿಯಾದ ಮಿಣ್ಕಿ.

917. ಮಿಣುಕುವ ನೂರಾರ್ ನಕ್ಷತ್ರಗಿಂತ್,
ಹೊಳೆವ ಒಂದು ಚಂದ್ರ ಇದ್ದರೆ ಸಾಕ್.

918. ಮಿಂಡ ಯಾರ ಗಂಡ? ಸೂಳೆ ಯಾರ ಹೆಣ್ಣ್.

919. ಮುದಿಯಂಗೆ ಮುದಿ ಸೊಕ್ಕು.

920. ಮುದಿಯಂಗೆ ಮದುವೆ ಮಾಡ್ದಂಗೆ.

921. ಮುದಿ ಎತ್ತಿಗೆ ಬರೆ ಕೊಡಿಲಿ ಹುಲ್ಲು ಮಡ್ಗಿದಂಗೆ.

922. ಮುಳುಗಿದವಂಗೆ ಹುಲ್ಲುಕಡ್ಡಿ ಆಧಾರ.

923. ಮುದಿಗೆ ಅಲಂಕಾರ ಮಾಡ್ದಂಗೆ.

924. ಮುತ್ತ್ ಕಳ್ದರೆ ಸಿಕ್ಕುದು, ಹೊತ್ತು ಹೋದರೆ ಸಿಕ್ಕುದುಲೆ.

925. ಮುಚ್ಚಿಕಿದ್ದರೆ ಹುಚ್ಚು ಬುಟ್ಟದ್ಯಾ.

926. ಮುಚ್ಚಿದವಂಗೆ ಮಸಣನೇ ಸುಖ.

927. ಮುತ್ತು ಕೊಟ್ಟ್ ಕೊಟ್ಟ್..........ಕಡೆಗೆ ಕೆಟ್ಟೆ, ಮುಟ್ಟು ನಿತ್ತ್ ನಾ ಕೆಟ್ಟೆ.

928. ಮುದ್ದು ಮಾಡ್ದ ದೇವುರು ಮೇಲೆ ಹೋತ್,
ಒದ್ದ ದೇವುರು ಮೋಲೆಲಿ ಕುದ್ದತ್.

929. ಮುಪ್ಪು ಬಂದ ಮೇಲೆ ಮೂರು ದಿನನೂ ಇರಿಕಾಗದ್.

930. ಮುಂದೆ ಉಟ್ಟು ಮಾರಿ ಹಬ್ಬ.

931. ಮುಂದೆ ಇದ್ದ್ ಮೂಗು ಹೋತ್, ಹಿಂದೆ ಇದ್ದ್ ಕಿವಿ ಹೋತ್.

932. ಮುಂದೆಂದ ಹೊಗ್‌ಳ್ ಬಡ, ಹಿಂದೆಂದ ತೆಗ್‌ಳ್ ಬಡ.

933. ಮುಂದೆ ಬಂದವಳು ತಿಂದತ್, ಕಡೆಗೆ ಬಂದವಳು ಗಡಿಗೇಲಿ ತಿಂದತ್

934. ಮಳೆ ಬಾತೆಲೆ ತೇಳಿ ಬಾವಿಗೆ ಉಚ್ಚೆ ಹೊಯ್ದಂಗೆ.

935. ಮೂಗನ ಮುಂದೆ ಮೂಗು ಕೆರ್ಕಂಡಂಗೆ.

936. ಮೂರು ಬುಟ್ಟವುಳು ಊರಿಗೆ ದೊಡ್ಡೊವುಳು.

937. ಮೂಲೆ ಮನೆಲಿ ಯಾಕೆ ಇದ್ದೋ ತೇಳಿರೆ,
ಹೇತ್ ಬಂದವುಕೆ ನೀರ್ ಕೊಡಿಕೆ ತೇಳ್ತ್.

938. ಮೂಸವು ಇಲ್ಲೆ ತೇಳ್‌ಕನ ಸೂಳೆನೂ ಪತಿವೃತೆ

939. ಮೂಳೆ ಮುರ್ದನೆ ತೇಳಿರೆ, ಇನ್ನು ಗುಂಡ್‌ಕಲ್ಲ್ ಇದ್ದಂಗೆ ಒಳೆ.

940. ಮೂಗು ಇರುವವರೆಗೂ ನೆಗ್‌ಡಿ ತಪ್ಪಿಕಿಲೆ.

941. ಮೂಗು ಹಿಡ್ಕಂಡ್ರೆ ಬಾಯಿ ತಾನಾಗಿ ಬಾಯಿ ಬುಟ್ಟದೆ.

942. ಮೂರು ಕಾಸ್ನ ಸಂಪಾದನೆ, ಆರ್ ಕಾಸನ ಖರ್ಚ್.

943. ಮೇಲೆ ತಳಕ್ ಒಳಗೆ ಹುಳುಕು.

944. ಮೈ ಮೇಲೆ ಬಿದ್ದರೂ ಮೂರು ಕಾಸಿಗೂ ಬೇಡ.

945. ಮುಖ ನೋಡಿ ಮಣೆ ಹಾಕುವೆ.

946. ಮೊಟ್ಟೆ ತಿಂದವುಕೆ ಮರಿ ಇಲ್ಲೆ.

947. ಮೊದ್ಲೇ ಮೈ ಕಳ್ಳೆ ಮಕ್ಕಾದ ಮೇಲೆ ಕೇಳೋಕಾ.

948. ಮೊಲನ ಏಳ್ಸಿ ಹೆಲಿಕೆ ಕುದ್ದಂಗೆ

949. ಮೊಟಾಳಿಗೊಂದು ಚೋಟಾಳ್

950. ಯಾರ್ದೋ ದುಡ್ಡು ಯಲ್ಲಮ್ಮನ ಜಾತ್ರೆ.

951. ಯಾವ ರಾಜ ಬಂದರೂ ರಾಗಿ ಬೀಸುದು ತಪ್ಪುದುಲೆ.

952. ಯಾರ ಕಾಲಿಗೂ ಬಿದ್ದರೂ, ಗಂಡನ ಮನೆಗೆ ಹೋದುತಪ್ಪುದುಲೆ.

953. ಯಾರಿಗೂ ಹೆದರದಂವ ಹೆಣ್ಣಿಗೆ ಹೆದ್‌ರ್ದೆ.

954. ಯಾರಿಗೂ ಹೆದರದಂವ ನೆರಳಿಗೆ ಹೆದ್‌ರ್ತ್.

955. ಯಾವ ಕಾಲ್ ಮುರ್ದರೂ ಸೊಂಟಕ್ಕೆ ಊನ.

956. ಯಾಗೊಳೋ ಸತ್ತ ಹೆಣ್ಣ್ ಗುಣವಂತೆ.

957. ಯಾಸಗಾತಿ ಹತ್ರ ದೋಸೆ ಕೊಟ್ಟರೆ,
ಮೂಸಿ ನೋಡಿ ಮುನ್ನೂರು ಮುಕ್ಕಿತ್.

958. ಯುವರಾಜ, ಮಹಾರಾಜ ಇಬ್ಬರೂ ಸೇರಿ ಮಂಟಪಕ್ಕೆ ಬೆಂಕಿ ಹಾಕಿದಂಗೆ.

959. ಯೋಗ ಕಂಡವು ಇಲ್ಲೆ, ಹೇಲ್ ತಿಂದವು ಇಲ್ಲೆ.

960. ರಟ್ಟೆ ಗಟ್ಟಿ ಉಟ್ಟುತ ಜಗಳಕ್ಕೆ ಕಾಲ್ ಕೆರ್ಕಂಡ್ ಹೋಕಾಗದ್.

961. ರಣಹೇಡಿ ಕೈಯಿಗೆ ಆಯುಧ ಕೊಟ್ಟಂಗೆ.

962. ರಾಗಿಕಲ್ಲ್ ತಿರ್‌ಗ್‌ಕಾನ ಊರೆಲ್ಲಾ ನೆಂಟ್ರ್

963. ರಾಜ್ಯಕ್ಕೆ ಬೆಂಕಿ ಹಾಕಿ ರಾಜಂಗೆ ಶರಣಾದಂಗೆ.

964. ರಾಗಿ ತಿಂದಂವಂಗೆ ಯಾವ ರೋಗ ಇಲ್ಲೆ.

965. ರಾಮ ರಾಜ್ಯ ಆಳ್ದರೂ ರಾಗಿ ತಿಂಬದು ತಪ್ಪಿಕ್ಕಿಲ್ಲೆ.

966. ರಾತ್ರೆ ಹೇಳ್ದ್ ನನ್ನ ಗಂಡಂಗೆ ನೆನಪಿದ್ದಿದ್ದರೆ
ಇನ್ನೊಂದು ಕಡ್ತ ಕಡಿತ್ತಿತ್ತ್.

967. ರಾವಣನ ಹೆಣ್ಣ್ ಇದ್ರೂ ಮುಂಡೆ, ಸತ್ರೂ ಮುಂಡೆ.

968. ರೊಟ್ಟಿಗೊಂದು ಬೆಣ್ಣೆ ಸಾಕ್ಷಿ.

969. ರೊಟ್ಟಿ ಜಾರಿ ತುಪ್ಪಕ್ಕೆ ಬಿದ್ದಂಗೆ.

970. ರೋಹಿಣಿ ಮಳೆ ಹೊಡ್ದರೆ ಓಣಿ ಎಲ್ಲಾ ಕೆಸ್‌ರ್.

971. ರೂಪ ನೋಡಿ ರೂಪಾಯಿ ಕೊಟ್ಟತ್.

972. ರಟ್ಟೆ ಮುರಿಯೋಕು ರೊಟ್ಟಿ ತಿನೊಕು.

973. ಲಾಡಿ ಕಟ್ಟಿಕೆ ಲಾಯಿಕಿಲ್ಲೆ

974. ಲಾಡಿ ಕಟ್ಟಿಕೆ ಗೊತ್ತ್‌ಲೆ, ಲೇವಡಿ ಮಾಡ್ದೆ

975. ವಡ್ಡಂದ್ ವಡ್ಡಾಚಾರ, ಕಳ್ಳಂದ್ ಖಾರ ನಾಲಿಗೆ

976. ವಾರದ ಗದ್ದೆಗೆ ಗೊಬ್ಬರ ಹಾಕಿ, ತನ್ನ ಗದ್ದೆ ಹಡ್ಲ್ ಬುಟ್ಟತ್

977. ವಿಘ್ನ ನಿವಾರಕ ವಿಘ್ನೇಶ್ವರನ ಮದುವೆಗೆ ಶತಕೋಟಿ ವಿಘ್ನ.

978. ವಿಘ್ನ ಬಾಕನ ವಿನಾಯಕ ಪೂಜೆ.
979. ಶೆಟ್ರ ಬುದ್ಧಿ ಸುಟ್ರೂ ಹೋದುಲೆ.
980. ಶಿವ ಕೊಡದೇ ಇರ್ದರ್ನ ಶವ ಕೊಟ್ಟದ್ಯಾ
981. ಶೆಟ್ಟಿ ಸಾರ್‍ಲೋ ಹೊತ್ತಿಗೆ ಪಟ್ನ ಹಾಳಾತ್
982. ಸಗಣಿಯವನ ಜೊತೆ ಆಡ್ದಕ್ಕಿಂತ, ಗಂಧವನನೊಟ್ಟಿಗೆ ಗುದ್ದಾಡ್ದು ಒಳ್ಳೆದ್.
983. ಸಜ್ಜನರ ಸಂಗ ಹೆಜ್ಜೇನು ಸವೆದಂಗೆ.
984. ಸಣ್ಣವನ ಸಂಗ ಅಭಿಮಾನಕ್ಕೆ ಭಂಗ.
985. ಸತ್ತ ಮೇಲೆ ಸ್ವರ್ಗಕ್ಕಿಂತ ಇರುವ ನರ್‌ಕನೆ ಸಾಕ್.
986. ಸತ್ತವನ ತಿಕ ಎತ್ತ?
987. ಸತ್ತವರ ಮಕ್ಕ ಇದ್ದವರ ಕೈ ಕೆಳಗೆ.
988. ಸತ್ತಾಕನ ಮುಖ ನೋಡಿಕೆ ಜನ ಮುಗಿ ಬಿದ್ದವೆ
ಇರ್ಕನ ಮುಖ ಮುರ್ದು ನೋಡುವೆ.
989. ಸತ್ತ ಹೆಣದ ಮೂಗು ಕೊಯ್ಯಕೂ ಅದುಲೆ.
990. ಸಮಯಕ್ಕೆ ಇರದ ಬುದ್ಧಿ ಸಾವಿರ ಇದ್ದರೆ ಏನ್,
ಸಮುದ್ರಕ್ಕೆ ಬೆಂಕಿ ಹಾಕಿದಂಗೆ.
991. ಸಮುದ್ರ ದೊಟ್ಟಿಗೆ ನೆಂಟತನ ಉಪ್ಪಿಗೆ ಬಡತನ.
992. ಸಮುದ್ರಕೆ ಬೆಂಕಿ ಹಾಕಿಕಾದೆನಾ
993. ಸಲಿಗೆ ಕೊಟ್ಟರೆ ಸುಲಿಗೆ ಮಾಡುವೆ.
994. ಸಲಿಗೆ ಕೊಟ್ಟ ನಾಯಿ ತಲೆಗೆ ಹತ್ತಿದೆ.

995. ಸತ್ತ ಹಸಿಗೆ ಹಾಲ್ ಹೆಚ್ಜ್.
996. ಸತ್ಯಕ್ಕೆ ಸಾವು ಇಲ್ಲೆ, ಸುಳ್ಳಿಗೆ ಸುಖ ಇಲ್ಲೆ.
997. ಸತ್ಯದ ಬಾಯಿ ಗಳ್ಸುದು, ನಾರ್‌ಲ್ ಬಾಯಿ ತಿಂಬದು.

998. ಸಂಕಟ ಬಾಕನ ವೆಂಕಟರಮಣ
999. ಸಜ್ಜನ ಮಜ್ಜನಕ್ಕೆ ಹೋಕನ, ಏಳ್ ನೂರು ಜನ ಬಂದ್ ಹೋದೋ ವ್ಯಾಜಕ್ಕೆ.
1000. ಸೆಟ್ಟಗ ಇರ್‌ಕನ ಕೈ ಯಾಕೆ ಸುಟ್ಟ್ ಕಂಬೂದು.
1001. ಸಣ್ಣವುಳು ಉಣ್ಣ್ ತೇಖನ, ದೊಡ್ಡ ಹರಿವಾಣ ತೊಳ್ತ್.
1002. ಸತ್ತ ಗಂಡ ಕನ್ಸಲಿ ಬಂದರೆ, ಉಂಬಕೆ ಉಡಿಕೆ ಕೊಟ್ಟದ್ಯಾ.
1003. ಸತ್ತವನ ತಿಕ ತೆಂಕಕ್ಕೊ ಬಡ್‌ಗಕ್ಕೊ.
1004. ಸತ್ತ ಹೆಗ್ಗಣ ಹೊಡಿಯಕೆ, ನನ್ನ ಗಂಡ ಮಾಹಾಶೂರ.
1005. ಸತ್ತವರ ಮನೆವರೆಗೆ ಹೋಕು, ಕೆಟ್ಟವರ ಜಾಗದವರೆಗೆ ಹೋಕು.
1006. ಸದರ ಕೊಟ್ಟರೆ ಅದರೊಳಗೆ ಕೈ ಹಾಕಿದೆ.
1007. ಸಮಯಕ್ಕೆ ಇಲ್ಲದ ಬುದ್ಧಿ ಎಷ್ಟ್ ಇದ್ದರೆ ಏನ್.
1008. ಸಮಯಕ್ಕೆ ಉಂಡ್ ಎಲೆ ಬಿಸಾಕಿದಂಗೆ.
1009. ಸಮುದ್ರಕ್ಕೆ ಹೋದರೂ ನಾಯಿ ನೆಕ್ಕುವ ನೀರ್.
1010. ಸವತಿ ತೇಳಿರೆ ಸತ್ತ ಹೆಣ ಬಾಯಿ ಬುಟ್ಟದೆ.
1011. ಸಂತೆ ಬಾಕನ ಚಿಂತೆ ಹೆಚ್ಚ್.
1012. ಸತ್ತನೆ ಸತ್ತನೆ ತೇಳಿ ಸಾವಿರ ಕೋಳಿ ತಿಂದತ್ತ್.
1013. ಸಾಯಕನ ಬಾತ್ ಶನಿಕಾಟ.
1014. ಸಾಯುವವರೆಗೆ ಶನಿಕಾಟ ಇದ್ದರೆ ಬಾಳ್ದು ಯಾಗ.
1015. ಸಾರ್ಸಿ ಗುಡ್ಸಿದ ಮನೆಲಿ, ನೆಂಟ ಬಂದ್ ಹೇತತ್.
1016. ಸಾಲಗಾರನ ಮನೆಗೆ ಸೌದೆ ಹೊತ್ತರೂ ಬಡ್ಡಿ ಬುಡಿಕಿಲ್ಲೆ.
1017 ಸಾಲ ಇಲ್ಲದಂವ ಶೆಟ್ಟಿ , ಕಾಯಿಲೆ ಇಲ್ಲದಂವ ಗಟ್ಟಿ.
1018. ಸಾವಿರ ಕುದುರೆ ಸರದಾರ, ಮನೆ ಹೆಣ್ಣಿಗೆ ಸದರ.
1019. ಸಾವಿರ ಕೊಟ್ರೋ ಸಂತಾನ ಹಡಿಯಕೆ ಆದುಲೆ.
1020. ಸಾಂಕಿದ ನಾಯಿ ಕಾಲ್ ಕಚ್ಚಿತ್.

1021. ಸಾಯುವ ಕುರಿಗೆ ಮೇಯೋದೇ ಕೆಲ್ಸ.

1022. ಸಾಲಗಾರ ಸುಮ್ಮನಿದ್ದರೂ, ಸಾಕ್ಷಿಗಾರ ಸುಮ್ಮನಿರಿಕಿಲೆ.

1023. ಸಾವಿರ ಸುಳ್ಳು ಹೇಳಿ ಒಂದು ಮದುವೆ ಮಾಡೋಕು.

1024. ಸಾವಿಲ್ಲದ ಮನೆಂದ ಸಾಸಿವೆ ತಂದಂಗೆ.

1025. ಸಾಲ ಮಾಡಿ ಎದೆಗೆ ಶೂಲ ಹಾಕಿಕಂಡಂಗೆ.

1026. ಸಾಲಗಾರ ಅಪ್ಪಂಗೆ ಮೋಸಗಾರ ಮಂಜ.

1027. ಸಿಟ್ಟ್‌ಂದ ಮೂಗು ಕೊಯ್ದರೆ ಶಾಂತಿ ಆದೆನಾ.

1028. ಸೀಗೆ ಬಲ್ಲೆ ಒಳಗಿರುವ ಬಾಳೆ,
ಬಾಯಿ ಒಳಗೆ ಇರುವ ನಾಲಿಗೆ ಹಾರಾಡಿಕಾಗದ್.

1029. ಸಿಹಿ ತೇಳಿ ನಾಯಿ ಸೆಟ್ಟಗ ನೆಕ್ಕಿತ್.

1030. ಸೀಗೆ ಬಲ್ಲೆಲಿ ಬಟ್ಟೆ ಒಣ್‌ಗಿಸಿಕೆ ಹಾಕಿಕಾಗದ್.

1031. ಸಿಟ್ಟ್ ಬಂದ್ ನೆತ್ತಿಗೇರ್ತ್

1032. ಸಿಟ್ಟ್‌ಂದ ಮೂಗು ಕೊಯಿಕಂಡಂಗೆ

1033. ಸಿಟ್ಟ್ ಬುಟ್ಟರೇ ಎಲ್ಲಾ ಸೇರಿ ಹೋದೆ.

1034. ಸಿಕ್ಕಿದೆ ದೊಡ್ಡದ್

1035. ಸುಣ್ಣಕ್ಕೆ ಬಂದಂವಂಗೆ ಎಮ್ಮೆ ಕ್ರಾಯ ಯಾಕೆ.

1036. ಸುಣ್ಣದ ಮಡಿಕೆಗೂ ಸೊಳೆ ಮನೆಗೂ ಬೇದ ಇಲ್ಲೆ.

1037. ಸುದ್ದಿ ತಂದವನ ಗುದ್ದಿ ಕೊಂದೋ.

1038. ಸೂಜಿ ಹಿಂದೆ ನೂಲು, ನಾಯಿ ಹೆಂದೆ ಬಾಲ ಹೋದು.

1039. ಸೂಳೆ ಸುಲ್ದ್ ತಿಂದತ್, ಹೆಣ್ಣ್ ಗೈದ್ ತಿಂದತ್.

1040. ಸುಂಕದವನೊಟ್ಟಿಗೆ ಸುಃಖ ದುಃಖ ಯಾಕೆ?

1041. ಸೂಳೆ ಶೃಂಗಾರ ಮಾಡುವ ಹೊತ್ತಿಗೆ,
ಹೆಳಂವ ತೆವುಳಿ ತೆವುಳಿ ಏಳ್ ಮೈಲ್ ಹೋತ್.

1042. ಸುಃಖ ಬಾಕನ ಹಿಗ್ಗಿ ಕಾಗದ್, ದುಃಖ ಬಾಕನ ಕುಗ್ಗಿಕಾಗದ್.

1043. ಸುಡು ಗಾಡಿಗೆ ಹೋಕಾಕನ ಬುದ್ಧಿ ಬಾತ್.
1044. ಸುದ್ಧಿ ತಂದವನ ಮದ್ದ್ ಇಸಿ ಕೊಂದೋ.
1045. ಸುಳಿಗೆ ಸಿಕ್ಕಿದ ಮೇಲೆ ಚಳಿಗೆ ಹೆದ್ರಿಕೆ ಇಲ್ಲೆ.
1046. ಸುಳ್ಳು ಹೇಳಿಕೆ ಮಾರಿ.
1047. ಸೂಜಿ ಹಾಕಿ ದಬ್ಬಳ ತೆಗೆಂವ.
1048. ಸೂ ತೇಳಿರೆ ಸೂಳೆ ಮಂಜ ತೇಳ್ದೆ.
1049. ಸೋದರತ್ತೆಗೆ ಮೀಸೆ ಬಂದರೆ ಚಿಕ್ಕಪ್ಪಾದೆನಾ?
1050. ಸೇರ್ದಷ್ಟ್ ಉಂಡ್ ಸೋರಿದ್ದಲ್ಲಿ ಮಲ್ಕಂಡತ್.
1051. ಸೋಬಾನೆ ಆದಂವ ಮೂರು ತಿಂಗ, ಬೆರೆ ಹೋದಂವ ಆರ್ ತಿಂಗ.
1052. ಸೋರುವ ಮನೆನೂ ಸೂಳೆ ಹೆಣ್ಣುನೂ ಬೇಡ.
1053. ಹಗಲ್ ಕಂಡ ಬಾವಿಗೆ ರಾತ್ರೆ ಬಿದ್ದಂಗೆ.
1054. ಹಗ್‌ಲೆಲ್ಲಾ ಹಾರಾಟ, ಇರ್ಲ್ ಪೂರ ತೂರಾಟ.
1055. ಹಗೆಗಾರ ಮುಂದೆ ಹೆಣ್ಣ್ ಎಡ್ಗಿ ಕಂಡ್ ಬಿದ್ದಂಗೆ.
1056. ಹಸ್‌ರಿದ್ದ ಕಡೆ ಮೇಯೋದು, ಬಿಸಿ ಇದ್ದಕಡೆ ಮಲ್ಗುದು.
1057. ಹಣ ಕಾಂಬಕನ ಹೆಣ ಬಾಯಿ ಬುಟ್ಟದೆ.
1058. ಹಣಕ್ಕಿಂತ ಗುಣ ಮೇಲ್.
1059. ಹಣ್ಣ್ ಇದ್ದ ಮರಕ್ಕೆ ಹಕ್ಕಿ ಬಾದು, ಹೆಣ್ಣಿದ್ದ ಮನೆಗೆ ಗಂಡ್ ಬಾದು.
1060. ಹಣೆ ಬರಕ್ಕೆ ಹೊಣೆ ಯಾರ್?
1061. ಹಸ್ ಕಪ್ಪಾದರೂ ಹಾಲ್ ಕಪ್ಪಾ.
1062. ಹಲ್ಲ್ ಇರ್ಕನ ಕಡ್ಲೆ ಇಲ್ಲೆ, ಕಡ್ಲೆ ಇರ್ಕನ ಹಲ್ಲಿಲ್ಲೆ.
1063. ಹರಿವ ನೀರಿಗೆ ಕಟ್ಟ್ ಇಲ್ಲೆ.
1064. ಹತ್ತ್‌ರದ ಊರುಂದ ದನ,ದೂರದ ಊರುಂದ ಹೆಣ್ಣ್ ತರೋಕು.
1065. ಹಂಗೂ ಕೆಟ್ಟತ್, ಹಿಂಗೂ ಕೆಟ್ಟತ್.
1066. ಹಣ್ಣ್ ತಿಂದವ ನುಣ್‌ಚಿಕಂಡತ್, ತೊಪ್ಪೆ ತಿಂದಂವ ಸಿಕ್ಕಿ ಹಾಕಿತ್.

1067. ಹತ್ತ್ ಮಕ್ಕಳ ಅವ್ವ ಆದರೂ, ಸತ್ತ ಮಂಜನ ಮರಿಯಲೆ.

1068. ಹತ್ತ್ ಹೆತ್ತವುಳಿಗೆ ಹನ್ನೊಂದೇನ್ ಕಷ್ಟ.

1069. ಹರಿವ ನೀರ್‌ಲಿ ಹೋಮ ಹಾಕಿದಂಗೆ.

1070. ಹಸ್ದ್ ಹಲಸ್ ತಿನ್ನ್, ಉಂಡು ಮಾವ್ ತಿನ್ನ್.

1071. ಹಸಿವು ಇಲ್ಲದಂಗೆ ಬಡ್ಸೋಕು, ಕಸ ಇಲ್ಲದಂಗೆ ಗುಡ್ಸೋಕು.

1072. ಹಸು ಕೂಸ್‌ನೊಟ್ಟಿಗೆ ಪಿಸು ಮಾತೇಕೆ.

1073. ಹಸ್ ಸಾಯಕನ ಬಾಯಿಗೆ ಹುಲ್ಲು ಹಾಕಿ ಸತ್ತದ್ಯಾ.

1074. ಹಳ್ಳದ ನೀರ್ ಹಳ್ಳಕ್ಕೆ ಚೆಲ್ಲಿದಂಗೆ.

1075. ಹಳೆ ಗೋಡೆಗೆ ಮಣ್ಣು ಮೆತ್ತಿದಂಗೆ.

1076. ಹಳೆ ಹೆಣ್ಣ್‌ನ ಪಾದನೇ ಗತಿ.

1077. ಹಂದಿ ಕೊಬ್ಬಿದಂಗೆ ಕೊಬ್ಬಿಟ್ಟು.

1078. ಹರಿಕೆ ಮಾಡಿಕಂಡರೆ ಮಕ್ಕ ಆದುಲೆ.

1079. ಹಗ್‌ಲೆಲ್ಲಾ ಹಾದರ ಮಾಡಿ ಕತ್ತಲೆಗೆ ಬಾತ್‌ಗಡ,
ಗಂಡನ ತಲೆ ಹೇನ್ ನೋಡಿಕೆ.

1080. ಹಚ್ಚೆ ಹಾಕಿಸಿಕಂಡ ಆಳ್ಸಿರೆ ಹೋದೆನಾ.

1081. ಹಡ್‌ಗೇ ಹೋದ ಮೇಲೆ ಗಡಿಗೆದೇನ್.

1082. ಹತ್ತ್ ಜನ ಗಂಡ್‌ಸ್‌ಗ ಒಟ್ಟಿಗೆ ಬದುಕುವೆ,
ಎರಡ್ ಕರಿತಲೆವು ಒಟ್ಟಿಗೆ ಇರಿಕಿಲ್ಲೆ.

1083. ಹತ್ತ್ ಮೀನ್‌ಗೆ ಕುತ್ತು ಗೋತ್ತಾದುಲೆ.

1084. ಹತ್ತುವವಂಗೆ ಕುದುರೆ ಆಳುವವಂಗೆ ಚದುರೆ.

1085. ಹದ ನೋಡಿ ಅಳಿಯನ ಕರಿ.

1086. ಹಬ್ಬ ಕಳ್ದ ಮೇಲೆ ಪಾಯಿಸ ಮಾಡ್ದಂಗೆ.

1087. ಹರ್‌ಕ್‌ಲ್ ಮರಲಿ ಜೇನಿರ್ದು.

1088. ಹರ್ದದರ್ನ ಹೊಲಿ, ತೆರ್ದದರ್ನ ಮುಚ್ಚು.

1089. ಹರಿವ ನಿರ್‌ಲಿ ಹುಣ್ಸುಳಿ ತೊಳ್ದಂಗೆ.
1090. ಹರೆಯ ಇರ್‌ಕನ ಹಾದರ ಮಾಡಿ, ಮುಪ್ಪು ಬಾಕನ ಆಚಾರ ಹೇಳ್ತ್.
1091. ಹಲವು ದೇವುರ ನಂಬಿ ಹಾರವ ಕೆಟ್ಟತ್.
1092. ಹಲ್ಲ್ ಕಿಸಿಯಕೆ ಆದುಲೆ.
1093. ಹಳೆ ಬಟ್ಟೆಗೆ ನೂಲು ಕೇಡ್, ಮುದಿ ಹೊಟ್ಟೆಗೆ ಕೋಳ್ ಕೇಡ್.
1094. ಹಂಗೂ ಕೆಟ್ಟತ್ ಹಿಂಗೂ ಕೆಟ್ಟತ್ ಕೊಂಗಿ ಭಟ್ಟ.
1095. ಹಂಚಿಕಂಡ್ ಉಂಡರೆ ಹಸಿವು ಆಕಿಲೆ.
1096. ಹಂದಿ ಹಂದರದ ಮೇಲೆ ಕುದ್ದರೂ, ಹೇಲ್ ಕಾಂಬಕನ ಹಾರಿ ಬಿದ್ದದೆ.
1097. ಹಂದಿ ಕೊಬ್ಬಿರೆ ಸಾಕವಂಗೆ ಲಾಭ.
1098. ಹಂದಿ ಜೊತೆ  ಆಡಿಕಂಡ್, ಕೆಂದ ನಾಯಿ ಹೇಲ್ ತಿಂಬಕೆ ಕಲ್ತತ್.
1099. ಹಂದಿ ಹತ್ತ್ ಹೆತ್ತರೂ, ಒಂದು ಸಿಂಹದ ಮರಿಗೆ ಸಮ ಆಕಿಲೆ.
1100. ಹಂದಿ ತರ ನೂರು ವರ್ಸ ಬದುಕುದಕ್ಕಿಂತ,
ನಂದಿ ತರ ಮೂರು ವರ್ಸ ಬದಿಕಿರೆ ಸಾಕ್.
1101. ಹಂಪೆಗಿಂತ ನಮ್ಮ ಕೊಂಪೆನೆ ವಾಸಿ.
1102. ಹಾಲ್‌ಗೆ ಬಂದಂವಂಗೆ ಎಮ್ಮೆ ಕ್ರಾಯ ಯಾಕೆ?
1103. ಹಾಲ್‌ಗೆ ಹುಳಿ ಹಿಂಡಿದಂಗೆ.
1104. ಹಾಸಿಗೆ ಇದ್ದಷ್ಟ್ ಕಾಲ್ ಚಾಚೋಕು.
1105. ಹಾಲಿರ್‌ಕನ ಹಬ್ಬ, ನೀರ್ ಇರ್‌ಕನ ಜಳಕ.
1106. ಹಾಲ್ ಸಿಕ್ಕದೇ ಇರ್ಕನ ಕೊತ್ತಿಸನ, ನಿಯತ್ತ್‌ಲಿ ಇದ್ದದೆ.
1107. ಹಾರುವವನ ಮುಂದೆ ಇರಿಕಾಗದ್, ಕುದುರೆನ ಹಿಂದೆ ಇರಿಕಾಗದ್.
1108. ಹಾಕ್ಮಣೆ ನೂಕ್ಮಣೆ ಯಾಕ್ಮಣೆ.
1109. ಹಾದರಗಿತ್ತಿ ಮಾತ್ ಸತ್ಯ, ಗರತಿ ಮಾತ್ ಕಸ.
1110. ಹಾದರ ಗಿತ್ತಿ ನಡುಮನೆ ಲಾಯಿಕ, ಗರತಿ ಮನೆ ಕೊಂಬರೆ ಪೊರ್ಲು.
1111. ಹಾಲನ್ನ ಉಂಡ್ ಹಾಸ್ ಮಗಳೇ ತೇಳಿರೆ,

ಹೋಗಿ ಬರುವವರ ನೋಡಿಕ್ಕಂಡೆ ಮೂರು ಸಲ ನೀರ್ ತನ್ನೆ ತೆಳ್ತ್.

1112. ಹಾಲ್ ಕೊಡುವ ಹಸೆ ಸಾಯಲಿ, ಅದೆಂಗೆ.

1113. ಹಾವು ಹೊಡ್ದ್, ಹದ್ದಿಗೆ ಹಾಕಿದಂಗೆ.

1114. ಹಿಗ್ಗಿ ಹೀರೆಕಾಯಿ ಆಕಾಗದ್.

1115. ಹೀರೆ ಕಾಯಿ ಹಾಕಿರೆ, ಸೋರೆ ಕಾಯಿ ಬುಟ್ಟದ್ಯಾ.

1116. ಹಿಟ್ಟ್ ಇಲ್ಲದಿದ್ದರೆ ನಮ್ಮಪ್ಪ ತಂದೆ ಮಡಿಕೆ ಇಲ್ಲದಿದ್ದರೆ, ನಮ್ಮವ್ವ ತಂದೆ.

1117. ಹಿಡ್ದ ಹಕ್ಕಿನ ಬುಟ್, ಹಾರುವ ಹಕ್ಕಿನ ಹಿಡಿಯಕೆ ಹೋತ್.

1118. ಹಿಟ್ಟ್ ತಿನ್ನದ ನಾಯಿನಂಗೆ ಉಟ್ಟು.

1119. ಹಿಟ್ಟ್ ಮುರ್ಕಂಡ್ ತಿಂಬೂಕು, ಪಾಯಿಸ ಸೊರ್ಕಂಡ್ ಕುಡಿಯೋಕು.

1120. ಹಿಟ್ಟ್ ಹೋತ್, ಹಿಟ್ಟ್ ಕಟ್ಟಿದ ಬಟ್ಟೆನೂ ಹೋತ್.

1121. ಹಿಡಿ ಹುಲ್ಲಿಗೂ ಹೊಡ್ದಾಡುವೆ, ಹೊರೆ ಹುಲಿಗೆ ಹೊಡ್ದಾಡಿಕಿಲ್ಲೆ.

1122. ಹಿರಿಯಕ್ಕನ ಚಾಳಿ ಮನೆ ಮಕ್ಕಳಿಗೆ.

1123. ಹಿಂದೆ ಬರುವಂತವರ್ನ ಹೆಗ್‌ಲ್‌ಲಿ ಹೊರಿಕಾಗದ್.

1124. ಹುಲಿ ಹೊಟ್ಟೆಲೆ ನರಿ ಹುಟ್ಟಿದೆನಾ?

1125. ಹುಟ್ಟಿಸಿದ ದೇವುರು ಹುಲ್ಲು ಮೇಯಿಸಿಕಿಲ್ಲೆ.

1126. ಹುಟ್ಟಿದಂವ ಸಾಯದೆ ಇದ್ದದ್ಯಾ.

1127. ಹುಣುಸೆ ಮರಕ್ಕೆ ಮುಪ್ಪಾದರೂ ಹುಳಿಗೆ ಮುಪ್ಪುಟ್ಟಾ?

1128. ಹುಲ್ಲು ಮುಚ್ಚಿದ ಬಾವಿ ಇದ್ದಂಗೆ.

1129. ಹುಚ್ಚನ ಕೈಲಿರುವ ದೊಣ್ಣೆ, ಎತ್ತ ಬೀಸಿದೆತಾ ಗೊತ್ತಾದುಲೆ.

1130. ಹುಟ್ಟುತ್ತಾ ಅಣ್ಣ ತಮ್ಮ ಬೆಳಿತಾ ದಾಯಾದಿಗ.

1131. ಹುಡುಕುವ ಹಗ್ಗ ಕಾಲಿಗೆ ತಗ್‌ಲ್‌ದಂಗೆ.

1132. ಹುಟ್ಟು ಗುಣ ಬೆಟ್ಟ ಹತ್ತಿರೆ ಹೋದುಲೆ.

1133. ಹುಟ್ಟು ಗುಣ ಸುಟ್ಟರೂ ಹೋತ್‌ಲೆ.

1134. ಹುಡುಗಾಟಕ್ಕೆ ಗೂಡೆತಂದ್, ನಡು ನೀರ್‌ಲಿ ಕೈ ಬುಟ್ಟತ್.

1135. ಹುಲಿ ಬಡ್‌ಕ್‌ಲಾಕನ, ನಾಯಿ ಬಂದ್ ತಿಕ ಮೂಸಿ ನೋಡ್ತ್.
1136. ಹುಲಿ ವಯಸ್ಸಾತ್‌ತಾ ಹುಲ್ಲು ತಿಂದದ್ಯಾ.
1137. ಹುಲಿಗೆ ತನ್ನ ಕಾಡದರೇನ್, ಬೇರೆ ಕಾಡಾದರೇನ್.
1138. ಹುಚ್ಚರ ಸಂಘ ಅಭಿಮಾನ ಭಂಗ.
1139. ಹುಚ್ಚು ಹೊಳಗೆ, ಹೂ ತೋಟ ಎದರ್
1140. ಹುಟ್ಟುಕನ ಕುದುರೆ ಮರಿ, ಬೆಳ್ದಂಗೆ ಕತ್ತೆ ಮರಿ.
1141. ಹುಟ್ಟಿದ ಮಂಜನ ಗುಣನೋ, ಬಂದ ಸೊಸೆನ ಗುಣನೋ.
1142. ಹುಟ್ಟಿದ ಮನೆಗೆ ಮಾತ್, ಕಟ್ಟಿದ ಕೆರೆಗೆ ತೂತು.
1143. ಹುಟ್ಟಿದ ಮೇಲೆ ಸಾಯೋಕು.
1144. ಹುಟ್ಟು ಗುಣ ಹೂಣಿರೂ ಹೋದುಲೆ.
1145. ಹುಟ್ಟು ಗುಣ ಹೂಣುವವರೆಗೆ.
1146. ಹುಟ್ಟು ಗುಣ ಹೂಣುವವರೆಗೆ, ಕಟ್ಟಿದ ಬಣ್ಣ ತೊಳಿಯುವವರೆಗೆ.
1147. ಹುಣುಸುಳಿ ಮರಕ್ಕೆ ಮುಪ್ಪಾದರೆ, ತವುರು ಮನೆಗೆ ಮುಪ್ಪಾದೆನಾ.
1148. ಹುಲ್ಲು ಹಾಕಿತ್‌ಲೆ, ನೀರ್ ಕುಡ್ಸಿತ್‌ಲೆ, ಹೋರಿ ಹೆಂಗೆ ಉಟ್ಟು.
1149. ಹುಲ್ಲ್‌ನ ಒಳಗೆ ಹಲ್ಸನ ಹಣ್ಣ್ ಕೊಯ್ದಂಗೆ.
1150. ಹೂಡ್ರೆ ಒಲೆ, ಮಾಡ್ರೆ ಮನೆ, ಕೂಡ್ರೆ ಗಂಡ
1151. ಹೂಂಸಿದ್ ಯಾರ್ ತೇಳಿರೆ, ಮಾಸ್‌ಲ್ ಬಟ್ಟೆಂವ
1152. ಹೆತ್ತವುಳಿಗೆ ಹೆಗ್ಗಣ ಮುದ್ದು.
1153. ಹೆಣ ಹೊತ್ತವಂಗೆ ಉಗುರು ಬಾರನ.
1154. ಹೆಂಡ ಸಾರಾಯಿ ಸಾವಾಸ, ಹೆಣ್ಣ್ ಮಕ್ಕ ಉಪವಾಸ.
1155. ಹೆಡಗೆ ಹೋದೇ ಕಾಂಬೂದು, ಹಡಗ್ ಹೋದು ಕಾಂಬದುಲೆ.
1156. ಹೆಡ್ಡ ನಿಂಗೆ ಹೆಣ್ಣ್ ಯಾರ್ ಕೊಟ್ಟವೆ ತೇಳಿರೆ,
ನಮ್ಮ ಮನೆಲೆ ನಾಲ್ಕೈದ್ ಉಟ್ಟು.
1157. ಹೆಣ ಹೋರ್ದು ಯಾಕೆ ತೇಳಿರೆ ಋಣ ತೀರ್ಸಿಕೆತ.

1158 ಹೆಣ್ಣಿಲ್ಲದ ಮನೆ ಒಂದೇ ಹಣ್ಣಿಲ್ಲದ ಮರನೂ ಒಂದೇ

1159. ಹೆಣ್ಣ್ ಕೊಟ್ಟ ಮಾವನೂ, ಕಣ್ಣ್ ಕೊಟ್ಟ ದೇವುರೂ ಒಂದೇ.

1160. ಹೆಣ್ಣ್ ಕೊಟ್ಟ ಜಾಗಕ್ಕೂ, ಹೇಲುವ ಜಾಗಕ್ಕೂ ಹೊಗದಿರಿಕಾದೆನಾ?

1161. ಹೆಣ್ಣ್ ಹೆಚ್ಚಿದ್ದ ಮನೆ, ಎಸಂಡ್ ಜಾಸ್ತಿ ಇದ್ದ ಕೆರೆ ಜಾಸ್ತಿ ಕಾಲ ಇರ್ದುಲೆ.

1162. ಹೆಣ್ಣ್ ಹೆಣಕ್ಕೆ ಮರ್ಟತ್, ಗಂಡ್ ಗಂಟಿಗೆ ಮರ್ಟತ್.

1163. ಹೆಣ್ಣ್ ಹೆತ್ತವು ಹಣ್ಣಾದೋ, ಗಂಡ್ ಹೆತ್ತವೂ ಗುಂಡಾದೋ.

1164. ಹೆತ್ತ ಮೇಲೆ ಹೆಣ್ಣಿಗೆ ಬುದ್ಧಿ ಬಾತ್, ಉತ್ತ ಮೇಲೆ ಎತ್ತಿಗೆ ಬುದ್ಧಿ ಬಾತ್.

1165. ಹೆಗ್ಲ್ ಮ್ಯಾಲೆ ಇರುವ ಜನಿವಾರನೋ, ಸೊಂಟದಲ್ಲಿರುವ ಉಡೆದಾರನೋ.

1166. ಹೇಲ್ ಬಾಕನ ಹಿತ್ಲ್ ಹುಡ್ಕಿದಂಗೆ.

1167. ಹೇನಿಗೇನ್ ಗೋತ್ತ್ ಹೂವುದು ವಾಸನೆ.

1168. ಹೆತ್ ಹೇತ್ ನಮ್ಮಪ್ಪ ಏನ್ ಸಂಪಾದಿಸಿತ್.

1169. ಹೇಲ್ ತಿಂಬ ದೇವುರಿಗೆ, ಹೆಂಡ ಕುಡಿಯುವ ಪೂಜಾರಿ.

1170. ಹೇಳ್ದ ಮಾತ್ ಕಟ್ಟಿದ ಬುತ್ತಿ ಬಹಳ ದಿನ ಬಾದುಲೆ.

1171. ಹೇಳಂವ ಕಿವುಡಾದರೆ ಕೇಳಂವ ಕಿವುಡನಾ?

1172. ಹೆಗ್ಗಣ ಪರ ಊರಿಗೆ ಹೋದರ್ರೂ, ಮಾಳಿ ಕಡಿಯೋದು ಬುಟ್ಟತ್‌ಲೆ.

1173. ಹೆಣ್ಣ್ ಹುಡಿಕಂಡ್ ಪೇಟೆಗೆ ಹೋಗಿ, ಮೂಗಿನ ಕರ್ಕಂಡ್ ಬಾತ್.

1174. ಹೆಣ್ಣ್‌ಗೆ ಯಜಮಾನಿಕೆ ಕೊಡ್ದು ಒಂದೇ,
ನಾಯಿನ ಅಡಿಗೆ ಮನೆಲಿ ಕೂರ್ಸುದು ಒಂದೇ.

1175. ಹೆಣ್ಣ್ ಕೆಟ್ಟರೆ ತವುರು ಮನೆ ಕೇಡ್.

1176. ಹೆತ್ತರೂ ಒಂದೇ ಸತ್ತರೂ ಒಂದೇ.

1177. ಹೆಣ್ಣ್ ಹೆಚ್ಚಿಗಿದ್ದ ಮನೆ, ಎಸಂಡ್ಡ್ ಹೆಚ್ಚಿಗಿದ್ದ ಕೆರೆ
ಹೆಚ್ಚ್ ಸಮಯ ಉಳಿಯಕ್ಕಿಲ್ಲೆ.

1178. ಹೆತ್ತವುಕೆ ಮಕ್ಕ ಭಾರನಾ, ಕುಂಬಳ ಬಳ್ಳಿಗೆ ಕಾಯಿ ಭಾರನಾ.

1179. ಹೆಂಡ ಇದ್ದರೆ ನನ್ನ ಗಂಡ ಇದ್ದಂಗೆ, ಬಾಡ್ ಇದ್ದರೆ ಬಳಗನೆ ಇದ್ದಂಗೆ,

ಮೀನ್ ಇದ್ದರೆ ಮಿಂಡ ಇದ್ದಂಗೆ.

1180. ಹೆಂಡ ಕುಡುಕನ ಹಂಬಾಕ್ ನೋಡು.

1181. ಹೆಂಡದ ಮಡಿಕೆಗೆ ದಂಡ ಕಟ್ಟಿದಂಗೆ.

1182. ಹೇಡಿಗೆ ಬೆನ್ನ್ ಹಾಕಿಕಾಗದ್.

1183. ಹೇಸಿ ಮದುವೆಗೆ ಹೋಕಾಗದ್,

1184. ಹೇತ ತಿಕ ಹೇತಂಗೆ ದೇವುರಿಗೆ ಪೂಜೆ.

1185. ಹೇಲಿಗೆ ಕಲ್ಲ್ ಹೊಡ್ಡ್ ಮುಖಕ್ಕೆ ಹಾರ್ಸಿಕಂಡಂಗೆ.

1186. ಹೇಳಿಕೆ ಮಾತ್ ಕೇಳಿ ಹೆಣ್ಣ್‌ನ ಬುಟ್ಟಂಗೆ.

1187. ಹೇಳ್ದವುಕೆ ಏಳಾಣೆ ಮಾಡ್ದವುಕೆ ಮೂರಾಣೆ.

1188. ಹೆಳ್ದೊಂದು ಮಾಡ್ದೊಂದು.

1189. ಹೆಳ್ದೊಕ್ಕಿಂತ ಸುಮ್ಮನೆ ಕೂರ್ದೆ ಒಳ್ಳೆದ್.

1190. ಹೇಳದೆ ಹೋಗುವವಳು ಹಾಲಿಗೆ ಹೆಪ್ಪಾಗಿದ್ಯಾ.

1191. ಹೊಟ್ಟೆಗೆ ಹಿಟ್ಟಿಲ್ಲೆ, ಜುಟ್ಟಿಗೆ ಮಲ್ಲಿಗೆ.

1192. ಹೊಟ್ಟೆ ಕಿಚ್ಚಿಗೆ ಒಳ್ಳೆ ಹಾವು ಆಡ್ಸಿರೆ,ಕಾಟಿ ಮೂರ್ಖ ಆಡ್ಸಿದಂಗ ಆದುಲೆ.

1193. ಹೊಟ್ಟೆ ತುಂಬಿದವಂಗೆ ಕಣ್ಣ್ ಕಾಂಬಲೆ.

1194. ಹೊಟ್ಟೆಗಾಗಿ ನಾ ಕೆಟ್ಟೆ.

1195. ಹೊರಗೆ ಇರುವ ಕಳ್ಳನ ಹಿಡಯಕ್,
ಒಳಗೆ ಇರುವ ಕಳ್ಳನ ಹಿಡಯಕೆ ಆಕಿಲೆ.

1196. ಹೊಸ ನೀರಿಗೆ ಮೀನ್ ಹತ್ತಿದಂಗೆ.

1197. ಹೊಸ ನೀರ್ ಬಂದ್, ಹಳೆ ನೀರ್ ಕೊಚ್ಚಿಕಂಡ್ ಹೋತ್.

1198. ಹೊಸ ಮನೆಗೆ ಕಾಗೆ ಹೊಕ್ಕಿದಂಗೆ.

1199. ಹೊಸ ಮಡಿಕೆಗೆ ನೀರ್ ಹೊಯ್ದಂಗೆ.

1200. ಹೊಸತರ್ಲಿ ಅಗಸ ಎತ್ತಿ ಎತ್ತಿ ಒಕ್ತ್.

1201. ಹೊಸದ್ ಬಾಕಾಕನ ಹಳೆದರ್ನ ಮರೆಕಾಗದ್.

1202. ಹೊಸ ಊರಿಗೆ ಬಹಳ ನಿಸೂರ.

1203. ಹೂಂಸಿದ್ ಯಾರ್ ತೇಳಿರೆ ಮಾಸ್‌ಲ್ ಬಟ್ಟೆಂವ

1204. ಹೊಟ್ಟೆಗಿಲ್ಲದ ಶ್ಯಾನುಭೋಗ ಕಡ್ತ ಬಿಚ್ಚತ್.

1205. ಹೊತ್ತ್‌ಕಂಡ್ ಹೋದ ನಾಯಿ ಮೊಲ ಹಿಡ್ದದ್ಯಾ.

1206. ಹೊತ್ತು ಹೋದಂಗೆ ಕೊಡೆ ಹಿಡಿಯೋಕು.

1207. ಹೊರೆ ಕದ್ದಂವ ಜಾರಿಕಂಡತ್, ಹಿಡಿ ಕದ್ದಂವ ತಗಲ್ ಹಾಕಿಕಂಡತ್.

1208. ಹೋತ್ ಗಡ ಬಾತ್‌ಗಡ, ಅಂಬುಲಿ ಮಡಿಕೆ ತೂತು ಗಡ.

1209. ಹೇಲ್ ಉಚ್ಚೆ ಬಂದರೆ ನಿತ್ತಾದ್ಯಾ.

1210. ಹೋತ್ತ್‌ನ ಸುಮ್ಮನೆ ಕಳಿಬಡಿ, ಗಾದೆನ ಎಂದಿಗೂ ಮರಿಬಡಿ.

* * * * *

# ಉಪಸಂಹಾರ

ನಾನ್ ನಮ್ಮ ಸುತ್ತ ಮುತ್ತ ನಮ್ಮ ಜನಾಂಗದವರ ಬಾಯಿಂದ ಉದುರುವ ಮುತ್ತ್‌ನಂಥ ಪದಗಳ, ಗಾದೆ ಮಾತ್‌ಗಳ ಸಂಗ್ರಹನ ನಿಮ್ಮ ಮುಂದೆ ಇಕ್ಕ್‌ತಾ ಒಳ್ಳೆ. "ಎಂತ ಮುತ್ತ್‌ನಂಥಾ ಮಾತ್‌ನ ಹೇಳಿ ಬುಟ್ಟಾರಾ ನೀನ್! ಹಿಂಗೆ ಹೇಳುವ ಮಾತ್ ನಮ್ಮ ನಡುಲೆ ಕಂಡ್ ಬಂದದೆ. ನಾನ್ ಸಂಗ್ರಹಿಸಿದ ಗಾದೆ ಮಾತ್‌ಗ ನಮ್ಮ ನೆರೆ–ಕರೆ, ಬಂದ್–ಬಳಗ, ಕಿರಿಯವು–ಹಿರಿಯವು ಅಜ್ಜ–ಅಜ್ಜಿ, ಅಪ್ಪ–ಅಮ್ಮ, ಸಾಂಧರ್ಭಿಕ ಆಗಿ ಉಚ್ಚರಿಸಿದ ಗಾದೆ ಮಾತ್‌ಗಳ್ನ, ಬಹಾಳ ವರ್ಷಂದ ಕೇಳ್ದರ್ನ, ಮತ್ತೆ ಕೇಳಿ ತಿಳ್ಕಂಡದರ್ನ ಕೆಲವೊಂದು ಓದಿದ ಪುಸ್ತಕಗಳ್‌ಂದ, ಹಂಗೆನೆ ಕೆಲವು ಅನುವಾದಿಸಿದ, ಮತ್ತೆ ಮನ್ಸಗೆ ಹೊಳ್ದ ಗಾದೆ ಮಾತ್‌ಗಳ್ನ ಹೊತ್ತಿಗೆ ರೂಪಲಿ ಹೊರತರುವ ಪ್ರಯತ್ನ ನನ್ನದ್. ಗಾದೆ ಜನಪದ ನುಡಿಗಟ್ಟ್. ಬಾಯಿಂದ ಬಾಯಿಗೆ, ಜನರ್ದಂದ ಜನರಿಗೆ ತಲತಲಾಂತರ್‌ಂದ ಹರ್ದ್ ಬಂದ ಪದ ಸಂಪತ್. ಕೆಲವಷ್ಟು ಜೀವಂತ ಇನ್ನೂ ಉಳ್ದುಟ್ಟು. ಕೆಲವಂದಷ್ಟು ನಾಶ ಆಗಿರ್ದು. ಮತ್ತೊಂದಷ್ಟು ಕಾಲಘಟ್ಟದೊಟ್ಟಿಗೆ ಬದಲಾವಣೆ ಆಗಿರ್ದು. ಹೊಸ ಸೇರ್ಪಡನೂ ಆಗಿರ್ದು. ಮತ್ತೆ ಅದ್ ಮೂಲ ರೂಪಲೆ ಅಜರಾಮರ ಆಗಿ ಇರೋಕುತ ಆದರೆ,ಒಂದೂ ಅದ್ ಬಳಕೆ ಆಗ್‌ತಾ ಇರೋಕು, ಇಲ್ಲೆನಾ ಲಿಖಿತ ರೂಪಲಿ ರಕ್ಷಣೆ ಆಗಿ ಇರೋಕು. ಮುಂದೆನ  ಜನಾಂಗದ ಬದ್‌ಕನ ಒಟ್ಟೊಟ್ಟಿಗೆ ಸಂಗಾತ ಇರೋಕು, ಜೀವಂತ ಇರೋಕು. ಗಾದೆಗಳ್ನ ಹೇಳ್ತಾ ಹೋಕನ ಒಂದೊಂದು ತನ್ನದೆ ಆದ ಅರ್ಥ, ಭಾವಾರ್ಥ ಹೇಳ್ತಾ ಹೋದೆ. ಅದರ್ದೆ ಆದ ಮಹತ್ವ ಹಂಗೆನೆ ವ್ಯಾಪ್ತಿನ ಪಡ್‌ಕಂಡ್ ಉಟ್ಟು. ಕೆಲವೊಂದು ಒಂದಕೊಂದು ಸಂಬಂಧ ಹೋಲಿಕೆ ಇರ್ದು, ಇರದೇ ಇರ್ದು.ಪದ ಬಳಕೆ ತನ್ನದೇ ಆದ ಅರ್ಥನ ಕೊಟ್ಟದೆ.ಆ ಪದದ ಭಾವಾರ್ಥ ನಿಗೂಢ, ಭೀಕರ ಅರ್ಥ ಗರ್ಭಿತ. ನವರಸಭರಿತ ಆಗಿ ಉಳ್ದುಟ್ಟು. ಸಂದರ್ಭಕೆ ಸರಿಯಾಗಿ ಅರ್ಥಮಾಡಿಕಂಡರೆ ಸತ್ಯಾಂಶ ಮನವರಿಕೆ ಅದು. ಕೆಲವು ಸಲ ಪದ ಪ್ರಯೋಗ ಮೇಲ್ ನೋಟಕ್ಕೆ ಕೆಟ್ಟ ರೀತಿನೂ ಕಾಂಬೋದು. ಆದರೆ ಅದರ್ನ ಬುಡ್ಸಿ ನೋಡಿರೆ

ತುಂಬಾ ಪರಿಮಳಯುಕ್ತ. ಆಗ ತಾನೆ ಬುಡ್ಸಿದ ಹಲ್ಸ್‌ನ ಹಣ್ಣ್ . ಮತ್ತೆ ತಾರ್ಕಿಕ ಆಗಿ ಓರೆ ಹಚ್ಚಿ ನೋಡೋಕು, ಅರ್ಥೈಸಿಕಣೋಕು. ಗಾದೆ ಮಾತ್ ಸ್ವರ್ವ ವ್ಯಾಪ್ತಿ ಪ್ರತಿಯೊಂದು ದೇಶ, ರಾಜ್ಯ, ಸಮುದಾಯ ಜಾತಿ, ಜನಾಂಗ, ಧರ್ಮಲಿ ಕಂಡಬಂದದೆ. ಹಂಗೆನೆ ಜನಪ್ರೀಯತೆ ಸನ ಉಟ್ಟು. ಗೌಡ ಜನಾಂಗಲಿ ಸನ ಹೆಚ್ಚಿಗೆ ಬಳಕೆಲಿ ಇರುವ ನಾಣ್ನುಡಿ, ಲೋಕೋಕ್ತಿ, ಇದ್ ಬದ್‌ಕ್‌ನ ಒಂದು ಸೂತ್ರ. ಸಂದರ್ಭಕ್ಕೆ ಸರಿಯಾಗಿ ಬಾಯಿಂದ ಬರುವ ಒಕ್ಕಣೆ. ಒಕ್ಕಣೆ ಸತ್ಯನ ನಂಬುವಂತದ್, ಅರ್ಥ ಮಾಡಿಕಂಬೋ ಮನಸ್ಥಿತಿ ಇದ್ದರೆ. ಇಲ್ಲಿ ಎರಡಕ್ಕಿಂತ ಹೆಚ್ಚ್ ಜನ ಸೇರುವ ಕಾಲಲಿ ಮಾತಿಗೆ ಮಾತ್ ಬೆಳಿತಾ ಹೊಂದಂಗೆ ಗೊತ್ತಿಲ್ಲದೆನೆ ಗಾದೆಗ ಬಾಯಿಂದ ಹೊರಗಡೆ ಬಂದದೆ. ಇದ್ ಭಾಷೆ ಮತ್ತೆ ಪದ ಸಂಪತ್‌ನ ಹೆಚ್ಚಿಗೆ ಮಾಡುವ ನಿಘಂಟ್, ಪದ ಬಳಕೆಲಿ "ನಿಸರ್ಗ" ಗಿಡ, ಮರ, ಬಳ್ಳಿ, ಪ್ರಾಣಿ, ಪಕ್ಷಿ, ಬಂಧುವರ್ಗದ ಗುಣ, ಸ್ವಭಾವ, ಲಕ್ಷಣ, ಸಮಾಜದ ವ್ಯವಸ್ಥೆ, ಜೀವನ ಕ್ರಮ, ಬಡತನ, ಸಿರಿತನ, ದೇವುರು, ದೆವ್ವ, ಆಚಾರ–ವಿಚಾರ, ಕಟ್ಟ್, ಕಟ್ಟಳೆ, ಬುದ್ಧಿ, ಭಾವನೆ, ಸಾಮರ್ಥ್ಯ, ನೆಲ–ಜಲಕ್ಕೆ ಸಂಬಂಧಿಸಿದಂಗೆ ಗಾದೆಗ ಹುಟ್ಟುಲಿ–ಸಾವುಲಿ, ಯವ್ವನಲಿ–ಮುಪ್ಪುಲಿ, ವಿದ್ಯೆಲಿ–ಉದ್ಯೋಗಲಿ–ನಿರುದ್ಯೋಗಲಿ, ಮದುವೆಲಿ–ಮುಂಜುಲಿ, ವ್ಯಾಪಾರಿಲಿ–ವ್ಯವಹಾರಲಿ, ಸುಃಖಲಿ–ದುಃಖಲಿ, ಗೆಳೆತನಲಿ– ಹಗೆತನಲಿ, ಅಸಾಹಯಕತೆಲಿ ಪ್ರತಿ ಒಂದು ಕ್ಷಣಲಿ ಇಲ್ಲದೇ ಅದಿಕೆ ಒಂದು ಅರ್ಥ ಬಾದುಲೆ. ಯಾವುದೇ ಒಂದು ಪದನ ಬಳ್‌ಸಿರೆ ಅದ್ ಸಾಮಾನ್ಯ ಮನ್ಸಂಗೆ ಅರ್ಥ ಆಗುವಂಗೆ ಇರೋಕು. ಅಂತ ಸರಳ ರೂಪಲಿ ಇಲ್ಲಿ ಪದಗ ಬಳಕೆ ಆಗ್‌ತ್ತಾ ಹೋದೆ. ಪದ ತೇಳಿರೆ ಅಕ್ಷರಗಳ ಒಂದು ಗುಂಪು. ಒಂದು ಪದ ನಾನಾರ್ಥಗಳನ್ನ ಸನ ಹೊಂದಿದ್ದರೆ ನಾವು ಯಾರ್ನ ಬಳ್‌ಸಿ ಗಾದೆನ ಹೇಳುವೆನೋ ಅಂವಂಗೆ ನೋವಾದೂ, ಸಿಟ್ಟ್ ಬಾದೂ, ಸಮಧಾನ ನೀಡ್ದು, ಬದಲಾವಣೆ ತಾದು. ಬಳಸ್‌ಕನ ಎಚ್ಚರಿಕೆ ಬೇಕು. ಮಾತ್ ಆಡಿರೆ ಹೋತ್ ಮುತ್ತ್ ಒಡ್ದರೆ ಹೋತ್. ಮಾತ್ ಮನೆ ಕೆಡ್ಸಿತ್, ತೂತ್ ಒಲೆ ಕೆಡ್ಸಿತ್. ಹರಿ ಸೇವೆಲ್ಲಿ ವೆಂಕಟ ರಮಣ ದೇವ್ರು ಬಾಕನ ನಾವು ಎರಡ್ ನುಡಿಗಳ್‌ನ್ನ ಕೇಳಿಕಂಡವೆ.

ಸ್ವಾಮಿ ಮುತ್ತ್‌ನಂಥ ಎರಡ್ ನುಡಿಗಳ್ನ ನುಡ್ದದೆ. "ಏಳ್ ಗಿರಿ ಎಪ್ಪತ್ ಗಿರಿ ಮಂದಾರ ಗಿರಿ. ಚಿನ್ನದ ಮಂಟಪಲಿ ತೂಗಿ ನಿಂತೊಳ್ ನನ್ನಪ್ಪಯ್ಯ ಹುಲ್ಲು ಗಂಡಾರದ ಶಿಶುಭಕ್ತ ಮುಂದೆ ಬಾತ ದೇವುರು ನುಡ್ದೆ.

ಒಂದು ಗಾದೆ ಪ್ರಯೋಗ ಬಗ್ಗೆ ಮೀಮರ್ಶೆನ ಮಾಡ್ನೋ ಮುಂಡೆ ಮುದುವೆಲಿ ಉಂಡವನೆ ಗೆದ್ದತ್. ಮುಂಡೆ ಮತ್ತೆ ಮದುವೆ, ಮುಂಡೆ ಆಶುಭ ಪದ. ಮದುವೆ, ಕಲ್ಯಾಣ, ಶುಭಕಾರ್ಯ ಮುಂಡೆ ತೇಳಿರೆ ವಿಧವೆ, ಗಂಡ ಇಲ್ಲದವುಳು, ಗಂಡನ ಕಳ್ಕಂಡ ಹೆಣ್ಣ್, ಗಂಡ ಸತ್ತವುಳು ಹಿಂಗೆಲ್ಲಾ ಅರ್ಥ್ ಕೊಟ್ಟದೆ. ಹಿಂದಿನ ಕಾಲಲಿ ಗಂಡ ಸತ್ತವುಳು ಪಾಡ್‌ನ ನಾವು ಇತಿಹಾಸಲಿ ಓದಿರುವ, ಕೇಳಿರುವ, ಅವಳ ಪರಿಸ್ಥಿತಿ ತುಂಬಾ ಕಠೋರ ಆಗಿ. ಇತ್ತ್ ಸತಿಸಹಗಮನ ಪದ್ಧತಿ ಇದ್ದ ಕಾಲಲಿ ಗಂಡ ಸತ್ತವುಳು, ಗಂಡನ ಚಟ್ಟಕ್ಕೆ ಹಾರಿ ಆತ್ಮಹತ್ಯೆ ಮಾಡಿಕಣಕು, ಇಲ್ಲೆ ಬಲವಂತ ಆಗಿ ಅವುಳನ ಬೆಂಕ್ಕಿಗೆ ಹಾಕುತ್ತಿದ್ದೊ. ಆ ಮೇಲೆ ತಲೆನ ಕೇಶ ಮುಂಡನ ಮಾಡ್ತಿದ್ದೊ. ಅವುಳ್ನ ಕಂಡರೆ ಅಶುಭ ತೇಳ್ದರಂದ, ಯಾರ ಕಣ್ಣಿಗೆ ಕಾಣದಂಗೆ ಬದುಕೊಕು. ಹಣೆಂದು ಕುಂಕುಮ ಅಳ್ಸಿ, ಮದುವೆಲಿ ಕಟ್ಟಿದ ಮಾಂಗಲ್ಯ ಕಿತ್ತ್, ಬಳೆ ಒಡ್ಸಿ, ಮೂಗುತಿ, ಕಾಲುಂಗುರು, ಓಲೆ, ಎಲ್ಲಾ ತೆಗ್ದ್ ಏನ್ ಮುತ್ತೈದೆ ಭಾಗ್ಯ ತೇಳುವೆ ಅದರ್ನ ಕಿತ್ತ್ ಕಂಬೊತ್ತಿದ್ದೊ. ಆಗ ಅವುಳ ಬದಕ್ ಆಶೆ, ಕನಸ್ ಎಲ್ಲಾ ಸತ್ತ ಹೋತಿತ್. ಬದಕ್ ಬರಿ ಕತ್ತಲೆ ಮತ್ತೆ ಬೆತ್ತಲೆ. ಬಿಳಿಸೀರೆ ಉಟ್ಟೆ ಬಹಳಷ್ಟು ಕಟ್ಟ್ ಪಾಡ್‌ಗಳ ನಡುವೆ, ದಂಡನೆ ಒಳಗೆ ನುಲುಗಿ ಹೋತಿತ್ತ್. ಇಂದ್ ವಿಜ್ಞಾನ ಯುಗ ಎಲ್ಲದಕ್ಕೂ ಇತಿಮಿತಿ ಇರುವ ಕಾಲ. ಬೇಕಾದನ್ನ ತಕಂಡ್, ಬೇಡದರ್ನ ನಿರಾಕರಿಸುವ ಕಾಲ. ಹೆಣ್ಣ್ ಸನ ಗಂಡ್‌ನ ಸರಿಸಮಾನಳಾಗಿ ಬದುಕುವ, ದುಡಿವ, ಸರ್ವ ಸ್ವತಂತ್ರಳ್. ಗಂಡ ಸತ್ತರೆ ಹಿಂದೆ ಅವುಳ್ನ ಯಾರೂ ಮದೆವೆ ಆತಿತ್ತ್‌ಲೆ. ಸಮಾಜದ ಒಪ್ಪಿಸುದು ತುಂಬಾ ಕಷ್ಟ. ಒಂದು ಸಮಯ ಮದುವೆ ಆಗಿ ಹೋದರೆ ಅದೊಂದು ಮಹಾಕಾರ್ಯ, ಅಂದರೆ ಅಲ್ಲಿ ಉಂಡಂವ ಗೆದ್ದತ್, ಅಂದರೆ ಮದುವೆ ಆತ್, ಊಟನೂ ಅತತಾ ಅರ್ಥ. ಆದರೆ ಇಂದ್ ಮುಂಡೆ ತೇಳುವ ಪದ ಈಗಳು

ಜೀವಂತ ಉಟ್ಟು. ಮುಂದ್‌ವರ್ದ್‌ ಈ ಕಾಲಲಿ ಬಳಕೆ ಕಡಿಮೆ. ಹಿಂದೆಲ್ಲಾ ಆ ಪದ ಮಕ್ಕಳಿಗೆ ಗೊತ್ತಿತ್ತೊ ಇಲ್ಲೆನೊ, ಹಿರಿಯವು ಮನೆಲಿ ಆ ಪದಗಳ್ನ ಬೈಗೊಳಕ್ಕೆ ಬಳ್ಸತಿದ್ದೊ. ಅದರ್ನ ಕೇಳಿಕಂಡ ಮಕ್ಕ ಯಾರ್‌ತ ಇಲ್ಲೆ ಸಿಕ್ಕಿದ ಹೆಣ್ಣ ಮಕ್ಕಲಿಗೆ ಅಕ್ಕಂದರಿಗೆ, ಅಯ್ಯಕ್ಕೆಗಳಿಗೆ ಸಿಟ್ಟ್‌ ಬಾಕನ ಮುಂಡೆತಾ ಬೈಯ್ಯೋತಿದ್ದೊ. ಹೊಡಿಯಕೆ ಹೋದರೆ ದೂರ ಓಡಿ ಹೋಗಿ ಮತ್ತೆ ಕಿರ್ಚಿಕಂಡ್ ಹೇಳ್ತಿದ್ದೊ. ರಾತ್ರಿ ಮತ್ತೆ ಮನೆಗೂ ಕತ್ತಲಾದ ಮೇಲೆ ಬಂದ್ ಅಟ್ಟಲಿನೋ ಕಟ್ಲ ಅಡಿಲಿನೊ ಹೆದ್ರಿ ಕೂರ್ತಿದ್ದೊ. ಉಸ್‌ರ್ ಸದ್ದ್, ಪಾತ್ರೆಗೆ ಕಾಲ್ ಹೇಂಟಿದ ಸದ್ದ್ ಕೇಳಿ ಅಪ್ಪ ಎಳ್ದ್ ಹೋರೆಗೆ ಹಾಕಿ ಬಡಿಯತಿತ್ತ್. ಅಂದ್ ರಾತ್ರಿ ಊಟ ಮಾಡದ ಮಕ್ಕಳ ಮನ್ಸ್‌ಂದ ಅದ್ ಮರ್ತ್ ಹೋತಿತ್. ಪದ ಬಳಕೆಲಿ ಹೇಳ್ಸಿಕಂಡವರ, ಕರ್ಸಿಕಂಡವರ ಸಂಕಟ ಅವುಕೆ ಗೊತ್ತು. ಅದಿಕೆ ತನೆ ಹೇಳ್ದು "ಎರಡು ಪೆಟ್ಟ ಹೊಡ್ದರೂ ಪರವಾಗಿ ಇತ್ತಲೆ ಎಂತ ಕೆಟ್ಟ ಮಾತ್ ಹೇಳ್ತ್" ಕೋಲ್‌ಂದ ಹೊಡ್ದ ಬರೆನಾದರೂ ಹೋದು ಆದರೆ ಹೇಳ್ದ ಮಾತ್ ಹೋಕಿಲೆ ತಾ. ಕೆಲವು ಪದ ಬಳ್ಸಿ ಹೇಳ್‌ಕನ ಹೇಳುವೆ ಎಂತ ಕೆಟ್ಟ ಮಾತ್ ಹೇಳ್ತತಾ. ಅಯ್ಯೆ ಕಲ್ಸಿದಾ? ಅಪ್ಪಕಲ್ಸಿದಾ? ಮಾಸ್ತ್ರ ಕಲ್ಸಿದಾತಾ. ರಾವಣನ ಹೆಣ್ಣ್ ಮುಂಡೆ ತೆಳ್ದಕ್ಕೂ ರಾವಣನ ಹೆಣ್ಣ್ ಇದ್ದರೂ ಮುಂಡೆ, ಸತ್ತರೂ ಮುಂಡೆ ತೆಳ್ದಕ್ಕೂ ಇರುವ ವ್ಯತ್ಯಾಸ ತೀಳ್ಕೊಣೋಕು.

ಅದೆ ಗಾದೆನ ಇನ್ನೊಂದು ರೀತಿಲಿ ಅವಲೋಕನ ಮಾಡ್ರೆ ಒಬ್ಬ ವ್ಯಕ್ತಿ ಸಮಾಜದ ಕಟ್ಟ್ ಪಾಡ್‌ಗಳ ಒಳಗೆ ಬದ್‌ಕ್‌ನ ಕಟ್ಟಿ ಕಂಬೂದು ಎಷ್ಟು ಕಷ್ಟ ತೇಳುವಂತದ್. ಈ ಗಾದೆ "ಮುಂಡೆ ಮದುವೆಲಿ ಉಂಡನೆ ಗೆದ್ದತ್" ತೇಳ್ದು ಮುಂಡೆ ತೇಳುವಂತದ್ ಇಲ್ಲಿ ಒಂದು ಅಸಾಹಾಯಕತೆನ ಪದ. ಗಂಡ ಇಲ್ಲದವುಳು ಸಮಾಜದ ನಡುಲಿ ಬದುಕಿರೆ ಪಡುವ ಪಾಡ್ ಎಂತ ಕಠೋರನೋ ಹಂಗೆ ಒಬ್ಬ ವ್ಯಕ್ತಿ ಯಾವುದೋ ಕಾರಣದಿಂದ ಶೋಷಣೆಗೆ ಒಳಗಾಗಿ, ಹಿಂಜರಿಕೆಂದ, ಬಡತನಂದ ಇಲ್ಲೆ ಯಾವುದೋಒಂದು ಅಘಾತಂದ ದೊಡ್ಡ ಹೊಡ್ತದ ಮೇಲೆ ಏಳ್ದು ತುಂಬಾ ಕಷ್ಟ. ಒಂದು ಸಲ ಸಮಾಜದ, ಜನಾಂಗದ ಇಲ್ಲೆ ತನ್ನವರ್‌ಂದನೇ

ತಿರಸ್ಕ್ರತ ಆದರೆ ಅದನ್ನ ಮೆಟ್ಟಿ ಮತ್ತೆ ಮೇಲೆ ಬಾದು ತುಂಬಾ ಕಷ್ಟ. ಆ ಹೋರಾಟಲಿ ಗೆದ್ದ್ ಬಾದು ಒಂದು ದೊಡ್ಡ ಸಾಧನೆ, ಸಹಾಸ ತನ್ನ ಎಲ್ಲಾ ಅಸಾಹಾಯಕತೆನ, ಸರ್ರಿ ಗುರಿ ಸಾಧಿಸುವ ಛಲಂದ ಮೇಲೆ ಬಂದರೆ ಸಮಾಜ, ಜನಾಂಗ ನಿಬ್ಬೆರಗಾದೆ. ಬೆಸ್ ಮಂಜ ನೀ ಗಂಡ್ ತೇಳ್ದೆ. ಇಲ್ಲಿನ ಭಾವನಾತ್ಮಕ ಅನುಭವಕ್ಕೆ ಗಾದೆ ಹೋಲಿಕೆ ಆದೆ. ಹಿಂಗೆ ಗಾದೆನ ಬೇರೆ ಬೇರೆ ಆಯಾಮಲಿ ಪರಾಮರ್ಶಿಸಿ ನೋಡಕ್.

**ತೆಕ್ಕಡೆ ಬಿ. ಕುಮಾರಸ್ವಾಮಿ**

ಮುತ್ತಾರ್ಮುಡಿ ಗ್ರಾಮ, ಮೂರ್ನಾಡ್ ಅಂಚೆ

ಮಡಿಕೇರಿ ತಾಲೂಕು, ಕೊಡಗು ಜಿಲ್ಲೆ–571252

ಮೊ: 9483234335, ವಾಟ್ಸಾಪ್ : 6360875378



**ತೆಕ್ಕಡೆ ಬಿ. ಕುಮಾರಸ್ವಾಮಿ**

ಇವು ಕೊಡಗ್ ಜಿಲ್ಲೆ, ಮಡಿಕೇರಿ ತಾಲೂಕ್‌ನ ಮೂರ್ನಾಡ್ ಹತ್ರದ ಮುತ್ತಾರ್ಮುಡಿ ಗ್ರಾಮದ ತೆಕ್ಕಡೆ ಯಂ. ಬೆಳ್ಯಪ್ಪ ಮತ್ತೆ ಜಾನಕಿ ಇವರ ಸುರುನ ಮಂಜ. ಇವರ ಹೆಣ್ಣ್ ನಿಡ್ಯಮಲೆ ಮನೆತನಂದ ಬಂದ ನೇತ್ರಾವತಿ.

ಕುಮಾರಸ್ವಾಮಿ ಇವು ಕೊಡಗು ಜಿಲ್ಲೆ, ಮಡಿಕೇರಿ ತಾಲೂಕ್ ಶಿಕ್ಷಣ ಇಲಾಖೆನ ಸರಕಾರಿ ಮಾದರಿ ಪ್ರಾಥಮಿಕ ಶಾಲೆಲಿ ಶಿಕ್ಷಕ ಆಗಿ ಸುಮಾರ್ 23 ವರ್ಷಂದ ಸೇವೆ ಸಲ್ಲಿಸ್‌ತಾ ಒಳೊ. ಸಾಹಿತ್ಯಲಿ ಆಸಕ್ತಿ ಇರುವ ಇವು ಅರೆಬಾಸೆ ಹಂಗೆ ಕನ್ನಡಲಿ ಬಹಳಷ್ಟ್ ಕಥೆ, ಕವನ, ಹಾಸ್ಯ ಲೇಖನಗಳ್‌ನ ಬರಿತಾ ಒಳೊ. ಗೌಡ ಸಾಂಸ್ಕೃತಿಕ ಕಾರ್ಯಕ್ರಮ, ದಸರಾ, ಗಣೇಶೋತ್ಸವ ಕಾರ್ಯಕ್ರಮಲಿ ಚೌಂಡಿ ಕೋಲ ಪ್ರದರ್ಶನ ಮಾಡಿ ಮನ್ನಣೆ ಗಳ್ಸಿಯೊಳೊ. ಚಿತ್ರಕಲೆ, ಛದ್ಮವೇಷ ಮಣ್ಣ್‌ನ ಮಾದರಿ, ಅಲಂಕಾರ, ಪೇಪರ್ ಕಟ್ಟಿಂಗ್, ಪೇಪರ್ ಕ್ರಾಪ್ಟ್, ವಿಜ್ಞಾನ ಮಾದರಿ ತಯಾರಿಕೆ, ಜಾದೂ ಪ್ರದರ್ಶನ, ಪವಾಡ ರಹಸ್ಯ ಬಯಲು, ಮೇಂದಿ, ರಂಗೋಲಿ, ಏಕಪಾತ್ರಾಭಿನಯ, ನಾಟಕ, ಕಥೆ, ಕವನ ರಚನೆ, ಅಭಿನಯಗೀತೆ, ಮಿಮಿಕ್ರಿ ಹಿಂಗೆ ಬಹುಮುಖ ಪತ್ರಿಭೆ ಹೊಂದಿರ್‌ವ ಇವು, ತಾನ್ ಅಲ್ಲದೆ ಬಹಳಷ್ಟ್ ಮಕ್ಕಳಿಗೆ ಕಲ್ಸಿ ವೇದಿಕೆ ಕಲ್ಪಿಸಿ ಕೊಟ್ಟೊಳೊ. ಇವು ಕರ್ನಾಟಕ ರಾಜ್ಯ ಸರ್ಕಾರ ಶಿಕ್ಷಕರಿಗೆ ಕೊಡುವ 'ಅತ್ಯುತ್ತಮ ವಿಜ್ಞಾನ ಶಿಕ್ಷಕ ರಾಜೀವ್‌ಗಾಂಧಿ ಕರ್ನಾಟಕ ರಾಜ್ಯ ಪ್ರಶಸ್ತಿ'ನ ಪಡ್‌ಕಂಡೊಳೊ. ಅಲ್ಲದೆ ಬೇರೆ ಬೇರೆ ಪ್ರಶಸ್ತಿ, ಗೌರವ ಸನ್ಮಾನಗ ಸಿಕ್ಕಿಟ್ಟು. ಇವರ 'ಅರೆಭಾಷೆ ಗಾದೆಗ' ಸಂಗ್ರಹ ಪುಸ್ತಕ ಅರೆಬಾಸೆ ಸಾಹಿತ್ಯಕ್ಕೆ ಒಂದು ಉತ್ತಮ ಕೊಡುಗೆ.

**ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ**

**ಮಡಿಕೇರಿ.**

ರೂ. 80/-